ಜಯತು ಭಗವಾನ್

ಬಾಲಸರಸ್ವತೀ ಗ್ರಂಥಮಾಲಾ

---

# ಚಿತ್ರಗುಪ್ತನ ೧ನೆಯ ದಪ್ತರ

# ೧

# ದುಷ್ಟ ಚತುಷ್ಟಯ



ವಿದ್ವಾನ್

**ವಿದ್ಯಾಭೂಷಣ ಬಾಲಸರಸ್ವತೀ ನರಹರಿಶರ್ಮರಿಂದ**

ವಿರಚಿತವಾದುದು

---


ಬೆಂಗಳೂರು

ವಿ. ನೈಡ್ ಅಂಡ್ ಕಂಪೆನಿ, ಪವರ್ ಪ್ರೆಸ್ಸಿನಲ್ಲಿ

ಮುದ್ರಿಸಲ್ಪಟ್ಟಿತು.

Price 5 As.] **1931** [ಬೆಲೆ ೫ ಆಣೆ.

Publisher,

**G. Siddappa, Photographer,**

BANGALORE CITY.

ಸೋಲ್ ಏಜಂಟರು,

ಕೆ ಎ. ಚೌರಪ್ಪ ಅಂಡ್ ಸನ್ಸ್,

**ಪುಸ್ತಕ ವ್ಯಾಪಾರಿಗಳು,**

ಅವೆನ್ಯೂ ರೋಡ್, ಬೆಂಗಳೂರು ಸಿಟಿ.

ಜಯತು ಭಗವಾನ್

## ಶ್ರೀಮತ್ಕರ್ಣಾಟ ದೇಶಬಾಂಧವ ಮಹಾಶಯರಲ್ಲಿ

## ಬಾಲಸರಸ್ವತಿಯ ಸವಿನಯ ವಿನಿವೇದನ.



ಇಂದಿಗೆ ಪ್ರಾಯಿಕವಾಗಿ ೧೭ ವರ್ಷಗಳ ಹಿಂದೆ ಚಿತ್ರಗುಪ್ತನ ಮೊದಲನೆಯ ದಪ್ತರವನ್ನು ಬಿಚ್ಚಿ ಅದರಲ್ಲಿ ಹನ್ನೆರಡು ಪುಸ್ತಕಗಳನ್ನು ಆರಿಸಿಕೊಂಡು ನಮ್ಮ ಪ್ರಿಯಪಾಠಕರ ಮನೋವಿನೋದನಕ್ಕಾಗಿ ತಿಂಗಳಿಗೆ ಒಂದು ಗ್ರಂಥದಂತೆ ಮುದ್ರಿಸಿ ಕರ್ಣಾಟಭಾಷಾ ಪ್ರಪಂಚದ ಸೇವೆಯನ್ನು ಯಥಾಶಕ್ತಿಯಾಗಿ ನೆರವೇರಿಸಿದೆನು. ಆಗ ವಾಚಕಮಹಾಶಯರ ಪ್ರೋತ್ಸಾಹವು ವಿಶೇಷವಾಗಿ ದೊರೆತುದರಿಂದ ಚಿತ್ರಗುಪ್ತನ ಮೊದಲನೆಯ ದಪ್ತರವು ಎರಡು ಸಲ ಮುದ್ರಣಕ್ಕೆ ಸಿದ್ಧಪಡಿಸಲ್ಪಟ್ಟುದು. ಈ ಗ್ರಂಥಗಳು ಮುದ್ರಣವಾದ ಕೆಲವು ಕಾಲದೊಳಗಾಗಿಯೇ ಮಾರಾಟವಾಗಿ ಗ್ರಂಥಕರ್ತನ ಬಳಿಯಲ್ಲಿ ಬೀಜಭೂತವಾದ ಒಂದೊಂದು ಪ್ರತಿಯುಳಿವುದೇ ಶ್ರಮಸಾಧ್ಯವಾದುದೆಂಬುದನ್ನು ಇಲ್ಲಿ ಸೂಚಿಸುವುದಾದರೂ ಅದೆಂದಿಗೂ ಅತ್ಯುಕ್ತಿಯೆನಿಸದು.

ಪ್ರಕೃತದಲ್ಲಿ ಈ ಗ್ರಂಥಗಳು ಎಲ್ಲಿಯೂ ದೊರೆಯದೇ ಇರುವುದರಿಂದಲೂ, ನಮ್ಮ ಕರ್ಣಾಟ ಭಾಷಾಭಿಮಾನಿಗಳಲ್ಲಿ ಅನೇಕರು ಇವುಗಳನ್ನು ಓದುವುದರಲ್ಲಿ ಕೇವಲವಾಗಿ ಕುತೂಹಲಿಗಳಾಗಿರುವುದರಿಂದಲೂ ಈ ಚಿತ್ರಗುಪ್ತನ ಮೊದಲನೆಯ ದಪ್ತರವನ್ನು ಮೂರನೆಯ ಸಲ ಮುದ್ರಣಕ್ಕೆ ಸಿದ್ಧಪಡಿಸಬೇಕೆಂದು ಪ್ರೇರಿತನಾಗಿರುವೆನು. ನನ್ನ ಈ ಯುದ್ದೇಶಕ್ಕನುಸಾರವಾಗಿ ಬೆಂಗಳೂರು ಸಿಟಿಯ ಅವೆನ್ಯೂ ರೋಡಿನಲ್ಲಿ ಫೋಟೋಗ್ರಾಫರಾಗಿ ಕೆಲಸಮಾಡುತ್ತಿರುವ ಮೆ|| ಜಿ. ಸಿದ್ದಪ್ಪನವರು ಚಿತ್ರಗುಪ್ತನ ಮೊದಲನೆಯ ದಪ್ತರದ ಸ್ವತ್ವಾಧಿಕಾರವನ್ನು ನನ್ನಿಂದ ಪಡೆದುಕೊಂಡು ಈ ಗ್ರಂಥಗಳನ್ನು ಪ್ರಚಾರಪಡಿಸುವುದಾಗಿ ಸಂಕಲ್ಪ ಮಾಡಿರುವರು. ಅಲ್ಲದೆಯೂ ಬೆಂಗಳೂರು ಸಿಟಿಯ ಅವೆನ್ಯೂ ರೋಡಿನಲ್ಲಿ ಪುಸ್ತಕ ವ್ಯಾಪಾರಮಾಡುವುದರಲ್ಲಿ ಪ್ರಸಿದ್ಧರಾಗಿರುವ ಮೆ|| ಕೆ. ಎ. ಚೌರಪ್ಪ ಅಂಡ್ ಸನ್ಸರವರು ಈ ಗ್ರಂಥಗಳ ಮಾರಾಟಕ್ಕೆ ಸೋಲ್ ಏಜಂಟರಾಗಿ ಕೆಲಸಮಾಡುವುದಕ್ಕೆ ಭರವಸೆಯನ್ನಿತ್ತಿರುವರು.

ನಮ್ಮ ಕನ್ನಡ ನಾಡಿನ ಸ್ತ್ರೀಪುರುಷರಲ್ಲಿ ಆಬಾಲವೃದ್ಧರೆಲ್ಲರೂ ಈ ಗ್ರಂಥಗಳನ್ನು ಕೊಂಡುಕೊಂಡು ಓದಿ ಆನಂದಿಸಬೇಕೆಂಬ ಸದುದ್ದೇಶದಿಂದಲೇ ಇದರ ಬೆಲೆಯು ಸುಲಭವಾಗಿಡಲ್ಪಟ್ಟಿರುವುದು. ಆದುದರಿಂದ ನಮ್ಮ ದೇಶಬಾಂಧವ ಮಹಾಶಯರೆಲ್ಲರೂ ಈ ಸುಯೋಗವನ್ನು ಎಂದಿಗೂ ಕಳೆದುಕೊಳ್ಳಲಾರರೆಂದು ನಾವು ದೃಢವಾಗಿಯೂ ನಂಬಿರುವೆವು.

ಇತಿ, ದೇಶಭಾಷಾಭಿಮಾನಿವಶಂವದ

೧೫ ಮೇ ೧೯೩೧,
ಮೈಸೂರು.

**ಬಾಲಸರಸ್ವತೀ ನರಹರಿಶರ್ಮಾ,**
ಮೈಸೂರು.



ಜಯತು ಭಗವಾ೯

**ಬಾಲಸರಸ್ವತೀ ಗ್ರಂಥಮಾಲಾ**

---

# ಚಿತ್ರಗುಪ್ತನ ೧ನೆಯ ದಪ್ತರ

# ೧

# ದುಷ್ಟ ಚತುಷ್ಟಯ



ವಿದ್ವಾ೯

**ವಿದ್ಯಾಭೂಷಣ ಬಾಲಸರಸ್ವತೀ ನರಹರಿಶರ್ಮರಿಂದ**

ವಿರಚಿತವಾದುದು



## ಒಂದನೆಯ ವಿಲಾಸ

ನನಗೊಬ್ಬ ಸ್ನೇಹಿತನಿದ್ದನು. ಜಾತಿಯಲ್ಲಿ ಅಕ್ಕಸಾಲೆಯವನಾದ ಆತನು ಚಿನ್ನರನ್ನದ ನಗನಟ್ಟುಗಳನ್ನು ಮಾಡಿ ಮಾರುತ್ತಾ ಕೊಂಚಮಟ್ಟಿಗೆ ಹಣಗಾರ ನೆನಿಸಿಕೊಂಡಿದ್ದನು. ಆತನೊಂದು ದಿನ ನನ್ನ ಮನೆಗೆ ಬಂದು—ಶಶಾಂಕಶೇಖರ! ನನ್ನ ಸರ್ವಸ್ವವೂ ನಾಶವಾಗಿ ಹೋಯಿತು. ನಾನು ಈಗ ಮುಳುಗಿಯೇ ಹೋಗಿ ರುವೆನು. ನನಗಾದರೋ ಮುಂದಣಗತಿಯೇ ಕಾಣಿಸಲೊಲ್ಲದು, ಎಂದು ಕಣ್ಣೀರ ಸುರಿಸುತ್ತಾ, ಗದ್ಗದ ಸ್ವರದಿಂದ ಮಾತನಾಡಿದನು.

ಹೀಗೆ ಹೇಳಿದ ನನ್ನ ಸ್ನೇಹಿತನ ಹೆಸರು ಅಮರೇಂದ್ರನಾಥ. ಆತನ ವಯಸ್ಸು ಪ್ರಾಯಿಕವಾಗಿ ೩೪ ವರ್ಷಗಳಿಗೆ ಮೀರಿರಲಿಲ್ಲ. ಆತನ ದೇಹವು ಬಲ ವುಳ್ಳುದಾಗಿ ವರ್ಣವು ಸುಂದರವಾಗಿದ್ದಿತು. ಆತನ ಆಕಾರ ಪ್ರಕಾರಗಳೂ, ನಡೆನುಡಿಗಳೂ, ಭಾವಭಂಗಿಗಳೂ, ಮಾತು ಕತೆಗಳೂ ಇವೆಲ್ಲವೂ ಆತನ ಸದ್ವಂ

ಶಕ್ಕೆ ತಕ್ಕ ಹಾಗೆಯೇ ಇದ್ದುವು. ಆತನು ಆವಾಗಲೂ ಸತ್ಯಭಾಷಿ, ಮಿತಭಾಷಿ, ಮಿಷ್ಟಭಾಷಿ; ಇಷ್ಟೇ ಅಲ್ಲದೆ ಆತನು ಸ್ವಕೀಯ ಪರಕೀಯರಲ್ಲಿ ತೋರುತ್ತಿದ್ದ ಏಕರೀತಿಯಾದ ವಿನಯವು ವರ್ಣನಾತೀತವಾಗಿದ್ದಿತು.

ನಾನು ಆತನ ಭಯ ಸೂಚಕವಾದ ಮಾತುಗಳನ್ನು ಕೇಳಿದ ಕೂಡಲೆ— **ಅಮರ! ವಿಷಯವೇನು? ನಿನಗೆ ಸಂಭವಿಸಿರುವ ವಿಪತ್ತಾದರೂ ಏನು? ಬೇಗ** ಹೇಳು. ಅದಕ್ಕೆ ಪ್ರತೀಕಾರವೇನಾದರೂ ಇರುವುದಾಗಿದ್ದರೆ ನಾನು ಯತ್ನ ಮಾಡಿ ನೋಡುವೆನು. ಅದಕ್ಕಾಗಿ ನೀನು ಹೆದರಬೇಕಾದುದಿಲ್ಲ, ಎಂದು ಹೇಳಿದೆನು.

ಅಮರೇಂದ್ರನು ಒಂದು ಕ್ಷಣಕಾಲದ ವರೆಗೂ ಆವಾವುದನ್ನೋ ಆಲೋಚಿಸಿದ ಬಳಿಕ, ಈ ರೀತಿಯಾಗಿ ಹೇಳ ತೊಡಗಿದನು.

"ನೋಡು, ಶಶಾಂಕ! ಇಂದಿಗೆ ಎರಡು ತಿಂಗಳುಗಳ ಕೆಳಗೆ ದೊಡ್ಡ ಜಮೀದಾರನೊಬ್ಬನು ನಮ್ಮೂರಿಗೆ ಬಂದು ಕೋಟೆಯ ಮಠದ ರಸ್ತೆಯಲ್ಲಿರುವ ೭೩-೭೪-೭೫ ನೆಯ ನಂಬರು ಮನೆಗಳನ್ನು ಬಾಡಿಗೆಗೆ ತೆಗೆದುಕೊಂಡು ತನ್ನ ಸಂಸಾರದ ವಾಸಕ್ಕಾಗಿ ೭೩ನೆಯ ಮನೆಯನ್ನೂ, ತನ್ನ ಪರಿವಾರದವರಿಗೆಂದು ೭೪ನೆಯ ಮನೆಯನ್ನೂ, ತನ್ನ ಸಕಲ ಸಾಮಗ್ರಿಗಳ ಸಂಗ್ರಹಕ್ಕಾಗಿ ೭೫ನೆಯ ನಂಬರಿನ ಮನೆಯನ್ನೂ ಏರ್ಪಡಿಸಿದನು. ಈ ಮೂರು ಮನೆಗಳಿಗೂ ತಿಂಗಳೊಂದಕ್ಕೆ ೫೦೦ ರೂಪಾಯಿಗಳ ಬಾಡಿಗೆಯು ಸಲ್ಲಿಸಲ್ಪಡುವುದಾಗಿ ಒಪ್ಪಂದವಾಗಿರುವುದು.

ಆತನಿಳಿದಿರುವ ಮನೆಯ ಬಾಗಿಲಿನಲ್ಲಿ ಹಗಲಿರುಳೂ ಕುದುರೆ ಬಂಡಿಗಳು ನಿಂತೇ ಇರುವುವು. ಬರುವವರು ಬರುತ್ತಿರುವರು, ಹೋಗುವವರು ಹೋಗುತ್ತಿರುವರು. ಪ್ರತಿದಿನವೂ ಆತನ ಮನೆಯಲ್ಲಿ ನೂರಾರು ಮಂದಿ ದೀನಾನಾಥರಿಗೂ, ಬಡಬಗ್ಗರಿಗೂ, ಕುಂಟ ಕುರುಡರಿಗೂ ಭೋಜನೋಪಚಾರಗಳು ಎಡೆಬಿಡದೆ ನಡೆಯುತ್ತಲೇ ಇರುವುವು. ಆತನು ಇಲ್ಲಿಗೆ ಬಂದು ಕೊಂಚ ದಿನಗಳೇ ಆಗಿದ್ದರೂ, ಆತನ ಹೆಸರು ಎಲ್ಲೆಲ್ಲಿಯೂ ಹರಡಿಕೊಂಡಿರುವುದು. ಅನೇಕ ರಾಜಾಧಿರಾಜರೂ ಆತನ ದರ್ಶನವನ್ನು ಬಯಸಿ ಸಮಯವನ್ನು ಕಾಯುತ್ತಿರುವರು. ಇಂತಹ ಮನುಷ್ಯನಲ್ಲಿ ಪರಿಚಯವನ್ನು ಬಳೆಯಿಸಿದರೆ, ನನಗೂ ನಾಲ್ಕು ಕಾಸು ಲಾಭವಾಗಬಹುದೆಂಬ ಬರವಸೆಯಿಂದ ನಾನೂ ಆತನಲ್ಲಿಗೆ ನಿತ್ಯವೂ ಹೋಗಿ ಬರಲಾರಂಭಿಸಿದೆನು. ಕ್ರಮಕ್ರಮವಾಗಿ ಆತನ ಪರಿಚಯವು ಹೆಚ್ಚುತ ಬಂದಿತು. ಹೀಗಿರಲೊಂದುದಿನ ಆತನು ನನ್ನ ಅಂಗಡಿಗೆ ಬಂದು ನನ್ನಲ್ಲಿದ್ದ ಚಿನ್ನರನ್ನದ

ನಗನಟ್ಟುಗಳೆಲ್ಲವನ್ನೂ ಪರೀಕ್ಷಿಸಿ, ಅವುಗಳಲ್ಲಿ ಹತ್ತು ಲಕ್ಷ ರೂಪಾಯಿಗಳಷ್ಟು ಬೆಲೆ ಬಾಳುವ ಒಡವೆಗಳನ್ನು ಕೊಂಡುಕೊಳ್ಳುವುದಾಗಿ ತಿಳಿಸಿದನು. ಆ ಕೂಡಲೆಯೇ ನಾನು ಆತನ ಮಾತನ್ನು ನಂಬಿ ಆತನಿಗೆ ಬೇಕುಬೇಕಾದ ಒಡವೆಗಳನ್ನು ಕೊಟ್ಟು ಕಳುಹಿದೆನು. ಬಳಿಕ ಈ ವ್ಯಾಪಾರದಿಂದ ನನಗೆ ಬರಬಹುದಾದ ಲಾಭಾಂಶವನ್ನು ಲೆಕ್ಕಮಾಡಿ ನೋಡಲಾಗಿ, ೩೫ ಸಾವಿರ ರೂಪಾಯಿಗಳ ಲಾಭ ಬರುವುದೆಂದು ತಿಳಿದು ಬಂದಿತು. ಇದರಿಂದ ನನಗುಂಟಾದ ಸಂತೋಷಕ್ಕೆ ಪಾರವೇ ಇರಲಿಲ್ಲ. ಅಯ್ಯೋ! ನಾನೇತಕ್ಕೆ ಈ ಕೆಲಸಕ್ಕೆ ಕೈಹಾಕಿದೆನು! ಇತರರ ಮಾತಿಗೆ ಬೆರಗಾಗಿ ನಾನೇತಕೆ ಇಷ್ಟು ಬೆಲೆ ಬಾಳುವ ಚಿನ್ನರನ್ನದ ಒಡವೆಗಳನ್ನು ಹಣವನ್ನು ಮುಂಗಡವಾಗಿ ತೆಗೆದುಕೊಳ್ಳದೆಯೇ ಆತನಿಗೆ ಒಪ್ಪಿಸಿದೆನು! ಹಾ ವಿಧಿಯೇ! ಲಾಭದ ಮೇಲಣ ದುರಾಶೆಯಲ್ಲವೇ ನನ್ನನ್ನು ಇಷ್ಟು ಸಂಕಟಕ್ಕೆ ಈಡು ಮಾಡಿತು. ಅಕಟಕಟ! ನಾನು ಹಾಳಾಗಿಯೇ ಹೋದೆನು."

ನಾನು—ಅಮರ! ನೀನು ಆರ ಕೈಯಲ್ಲಿ ಹತ್ತು ಲಕ್ಷ ರೂಪಾಯಿಗಳ ನಗನಟ್ಟುಗಳನ್ನು ಕೊಟ್ಟೆಯೋ, ಆ ನಗಗಳಾರವು?

ಅಮರ—ಅವು ಇತರರಿಂದ ತಂದುವುಗಳು. ಒಬ್ಬ ಮಾರವಾಡಿಯು ಜವಾಹಿರಿ ನಗಗಳನ್ನು ಮಾರುವುದಕ್ಕಾಗಿ ನನ್ನಲ್ಲಿಟ್ಟಿರುವನು. ನಗಗಳು ಮಾರಿದ ಹಾಗೆಲ್ಲಾ, ಬಂದ ಹಣದಲ್ಲಿ ನನ್ನ ಲಾಭಾಂಶವನ್ನು ನಾನು ತೆಗೆದುಕೊಂಡು ಉಳಿದುದನ್ನು ಅವನಿಗೆ ಕೊಡುತ್ತಿರುವೆನು. ಈ ನಗರದಲ್ಲಿ ಅನೇಕ ಜನ ದಳ್ಳಾಳಿಗಳು ಈ ರೀತಿಯಲ್ಲಿಯೇ ಜೀವನಮಾಡಿಕೊಂಡಿರುವರು.

ನಾನು—ನೀನು ಹೇಳುವ ಆ ದೊಡ್ಡ ಜಮೀನ್ದಾರನು ಈಗ ಎಲ್ಲಿರುವನು?

ಅಮರ—ದೇವರಿಗೇ ಗೊತ್ತು. ಆತನು ಕೆಲವು ದಿನಗಳಿಂದೀಚೆಗೆ ಎಲ್ಲಿಯೋ ಮಾಯವಾಗಿರುವನು.

ನಾನು—ಅವನ ಕಡೆಯ ಜನಗಳಾರಾದರೂ ಈಗ ಇಲ್ಲಿರುವರೋ?

ಅಮರ—ಒಬ್ಬನೂ ಇಲ್ಲ. ಆದರೆ ಅವನಿದ್ದ ಮನೆಯಲ್ಲಿ ಈಗ ಮತ್ತಾರಾರೋ ಇರುವಂತಿದೆ. ಅವರೆಲ್ಲರೂ ಅವನ ಪರಿವಾರಕ್ಕೆ ಸೇರಿದವರೋ ಅಲ್ಲವೋ, ಅದುಮಟ್ಟಿಗೆ ನನಗೆ ತಿಳಿಯದು. ಈಗಿರತಕ್ಕವರೆಲ್ಲರೂ ನಮ್ಮೂರಿನವರು; ಅವರು ಅವನಲ್ಲಿ ಸಂಬಳಕ್ಕಾಗಿ ಕೆಲಸಕ್ಕೆ ಸೇರಿಕೊಂಡಿದ್ದರು.

ಇಂದಿನ ವರೆಗೂ ಆರಿಗೂ ಸಂಬಳ ದೊರೆತಂತೆ ಕಂಡುಬರುತ್ತಿಲ್ಲ. ಜಮೀ‌ನ್‌ದಾರನು ಮತ್ತೆ ಆವಾಗ ಹಿಂದಿರುಗಿ ಬರುವನೆಂಬುದನ್ನೂ ಅವರು ಕಾಣರು. ಸ್ಥಿತಿಗತಿಗಳನ್ನು ವಿಚಾರಿಸಿದ್ದರಲ್ಲಿ, ಅವನು ನಿಜವಾಗಿಯೂ ಜಮೀನ್ದಾರನು ಅಹುದೋ ಅಲ್ಲವೋ, ಎಂದು ಸಂದೇಹ ಪಡುತ್ತಿರುವರು.

ನಾನು—ಅವನು ಆವ ದೇಶದ ಜಮೀನ್ದಾರನೆಂದು ಹೇಳಿಕೊಂಡಿರುವನು.

ಅಮರ—ರಾಮಪುರದ ಜಮೀನ್ದಾರನೆಂದು ನಾನು ಕೇಳಿರುವೆನು.

ನಾನು—ಅವನ ಮಾತು ಕತೆಗಳು ಹೇಗೆ ?

ಅಮರ—ದೇಶಕ್ಕೆ ತಕ್ಕ ಹಾಗೆ.

ನಾನು—ಅವನು ನಿನ್ನಿಂದ ಒಡವೆಗಳನ್ನು ತೆಗೆದುಕೊಳ್ಳುವಾಗ ಏನ ಹೇಳಿದನು ?

ಅಮರ—ಮನೆಯ ಹೆಂಗುಸರಿಗೆ ತೋರಿಸಿ, ಅವರು ಒಪ್ಪುವುದಾದರೆ ಒಡವೆಗಳನ್ನು ತೆಗೆದುಕೊಳ್ಳುವೆನೆಂದು ಹೇಳಿದನು.

ನಾನು—ಹಣದ ವಿಷಯವೇನು ?

ಅಮರ—ನಗಗಳು ಒಪ್ಪಿಗೆಯಾಗುವ ಪಕ್ಷದಲ್ಲಿ ಹಣದ ಅರ್ಧವನ್ನು ಈಗಳೇ ಕೊಡುವೆನೆಂದೂ, ಉಳಿದ ಅರ್ಧವನ್ನು ೧೫ ದಿನಗಳೊಳಗಾಗಿ ರಾಮಪುರದಿಂದ ತರಿಸಿಕೊಡಬೇಕಾದುದರಿಂದ, ಅಲ್ಲಿನ ವರೆಗೂ ತಡೆಯ ಬೇಕೆಂದೂ ಹೇಳಿದನು.

ನಾನು—ಅವನು ಹೊರಟು ಹೋಗಿ ಇಂದಿಗೆ ಎಷ್ಟು ದಿನಗಳಾದುವು ?

ಅಮರ—ಹತ್ತು ಹನ್ನೆರಡು ದಿನಗಳಾಗುತ ಬಂದುವು.

ನಾನು—ಇಲ್ಲಿರತಕ್ಕ ಅವನ ಪರಿವಾರದವರಿಗೆ ಆತನ ಸ್ಥಳವು ಗೊತ್ತಿರಬಹುದೇ ?

ಅಮರ—ಅವನು ತಿಳಿಸಿದ್ದ ಸ್ಥಲಕ್ಕೆ ಅವರೆಲ್ಲರೂ ಕಾಗದವನ್ನು ಬರೆದಿದ್ದರು. ಆವುದಕ್ಕೂ ಉತ್ತರ ಬಾರದಿರುವುದರಿಂದ, ಎಲ್ಲರಿಗೂ ಸಂದೇಹಕ್ಕಿಟ್ಟಿರುವುದು. ಆದುದರಿಂದಲೇ ಅವನು ಮೋಸಗಾರನಿರಬಹುದೆಂದು ಎಲ್ಲರೂ ಹೇಳುತ್ತಿರುವರು.

ನಾನು—ಅಮರೇಂದ್ರನಾಥ! ನಾವೂ ಅಲ್ಲಿಗೆ ಹೋಗಿ ಅಲ್ಲಿರತಕ್ಕವರೊಡನೆ ಮಾತನಾಡೋಣ, ನಡೆ.

---

## ಎರಡನೆಯ ವಿಲಾಸ

ಅಮರೇಂದ್ರನಾಥನೊಡನೆ ಇಷ್ಟು ಮಾತುಕತೆಗಳು ನಡೆದ ಬಳಿಕ, ನಾನು ಮನೆಗೆ ಬಂದು ಸಾಧಾರಣವಾದ ವೇಷವನ್ನು ಧರಿಸಿ, ಮನೆಯಿಂದ ಹೊರಗೆ ಹೊರಟೆನು. ಅಷ್ಟು ಹೊತ್ತಿಗೆ ಸರಿಯಾಗಿ ಅಮರೇಂದ್ರನೂ ನನ್ನ ಜತೆಗೆ ಬಂದು ಸೇರಿದನು. ಕೊಂಚ ಹೊತ್ತಿನಲ್ಲಿಯೇ ನಾವಿಬ್ಬರೂ ಕೋಟೆಯಲ್ಲಿರುವ ಮಠದ ಬೀದಿಗೆ ಬಂದು ಸೇರಿದೆವು. ಅಲ್ಲಿ ೭೩ನೆಯ ನಂಬರಿನ ಮನೆಯನ್ನು ಕಂಡು ಹಿಡಿದು ಅದರೊಳಗೆ ಪ್ರವೇಶ ಮಾಡಿದೆವು. ಬಾಗಿಲಲ್ಲಿ ನಿಂತಿದ್ದವನೊಬ್ಬನು ನಮ್ಮಗಳ ಉದ್ದೇಶವನ್ನರಿತು, ನಮ್ಮನ್ನು ಮನೆಯೊಳಗೆ ಕರೆದುಕೊಂಡು ಹೋದನು. ಅಲ್ಲಿ ದುರ್ಗಾಪ್ರಸಾದನೆಂಬೊಬ್ಬ ಮಹಾಶಯನಿಗೂ ನಮಗೂ ಮಾತುಕತೆಗಳು ನಡೆದುವು. ಅಪರಿಚಿತನಾದ ನಾನು ಆರೆಂಬುದು ಗೊತ್ತಾಗದೆ ತನ್ನಲ್ಲಿ ತಾನೇ ಆಲೋಚಿಸಿಕೊಳ್ಳುತ್ತಿದ್ದ ದುರ್ಗಾಪ್ರಸಾದನ ಭಾವಭಂಗಿಗಳನ್ನರಿತ ನನ್ನ ಸ್ನೇಹಿತನು ಆತನ ಕಿವಿಯಲ್ಲಿ ಪಿಸು ಮಾತನ್ನು ಆಡಿದ ಬಳಿಕ, ಆತನು ನಮ್ಮಿಬ್ಬರನ್ನೂ ಒಂದು ಗೋಪ್ಯವಾದ ಕೋಣೆಯೊಳಗೆ ಕರೆದುಕೊಂಡು ಹೋಗಿ ಕುಳ್ಳಿರಿಸಿದನು. ಬಳಿಕ ಅಮರೇಂದ್ರನು ಮಾತನಾಡಿದನು:—

"ದುರ್ಗಾಪ್ರಸಾದ! ನಿನಗೆ ಅಪರಿಚಿತರಾದ ಈ ಮಹಾಶಯರು ನನ್ನ ಪರಮ ಸ್ನೇಹಿತರು. ಶ್ರೀ ಶಶಾಂಕಶೇಖರರೆಂದು ಇವರ ಹೆಸರು. ಇವರು ಈ ದೇಶದಲ್ಲಿ ಸುಪ್ರಸಿದ್ಧರಾದ ಪತ್ತೇದಾರರಾಗಿರುವರು. ನಿಮ್ಮ ಯಜಮಾನರಾದ ಜಮೀನ್ದಾರರು ನಡೆಯಿಸಿದ ಕೆಲಸಗಳನ್ನು ನೋಡಿ ನನಗೆ ಸಂದೇಹವುಂಟಾಗಲು, ನಾನು ಈ ಮಹಾಶಯರ ಒತ್ತಾಸೆಯನ್ನು ಬೇಡಿರುವೆನು. ನಿಮ್ಮ ಜಮೀನ್ದಾರರು ನಿಜವಾಗಿಯೂ ರಾಮಪುರದ ಜಮೀನ್ದಾರರಾಗಿರುವುದಾದರೆ, ನಾನು ಇಷ್ಟು ಚಿಂತಿಸಬೇಕಾದುದೇನೂ ಇರುವುದಿಲ್ಲ. ಈಗ ನನಗೆ ಬರಬೇಕಾದ ಹಣವು ಇನ್ನು ಹತ್ತು ವರ್ಷಗಳ ಮೇಲೆ ಬಂದರೂ ನನಗೆ ಭಯವಿಲ್ಲ. ಒಂದು ವೇಳೆ ನಿಮ್ಮ ಜಮೀನ್ದಾರರು ಕಪಟನಾಟಕವನ್ನು ಹೂಡಿದ್ದರೆ, ಗಲಭೆಯಿಲ್ಲದ ಹಾಗೆ ಹಣವನ್ನು ಬರಮಾಡಿಕೊಳ್ಳುವ ಉಪಾಯವನ್ನು ಹುಡುಕಬೇಕೆಂಬುದಕ್ಕಾಗಿಯೇ ಈ ಮಹಾಶಯರನ್ನು ನಾನಿಲ್ಲಿಗೆ ಕರೆತಂದಿರುವೆನು. ಈ ಸುದ್ದಿಯು ದೇಶದಲ್ಲಿ ಹರಡುವುದಾದರೆ, ನಾವು ಕೊಟ್ಟ ಹಣವು ಕೈಗೆ ಬಾರದಿರುವುದರ

ಜತೆಗೆ ಮತ್ತಷ್ಟು ಹಣವೂ ಕೈಬಿಟ್ಟು ಹೋಗುವ ಸಂಭವವುಂಟು. ಇದೂ ಅಲ್ಲದೆ ನಾನು ಆರಾರ ಪದಾರ್ಥಗಳನ್ನು ತಂದುಕೊಂಡು ವ್ಯಾಪಾರ ಮಾಡುತ್ತಿದ್ದೆನೋ, ಅವರೆಲ್ಲರೂ ಒಂದೇ ಕಾಲದಲ್ಲಿ ಓಡಿ ಬಂದು ನನ್ನನ್ನು ಮುತ್ತಿಕೆತ್ತು ತಿಂದುಬಿಡುವರು. ಅವರ ಕಿರುಕುಳದಲ್ಲಿ ನಾನು ಬದುಕುವುದೇ ಕಷ್ಟವಾಗಿ ಪರಿಣಮಿಸುವುದು. ಆದುದರಿಂದ ನಾನು ಈ ಅನೇಕ ಸಂಕಟಗಳನ್ನು ಚೆನ್ನಾಗಿ ಪರ್ಯಾಲೋಚಿಸಿ ಗಲಭೆಯಿಲ್ಲದೆ ಕಪಟಿಯಾದ ಜಮೀನ್ದಾರನನ್ನು ಹುಡುಕಿಸಿ ಹಣವನ್ನು ಬರಮಾಡಿಕೊಳ್ಳುವ ಏರ್ಪಾಡು ಮಾಡುವೆನು. ಅದಕ್ಕಾಗಿಯೇ ಇಲ್ಲಿನ ಸಂಗತಿಗಳೆಲ್ಲವನ್ನೂ ತಿಳಿದುಕೊಂಡು ಹೋಗುವುದಕ್ಕಾಗಿ ನಮ್ಮ ಮಿತ್ರನಾದ ಶಶಾಂಕಶೇಖರ ಮಹಾಶಯನನ್ನು ಜತೆಯಲ್ಲಿಯೇ ಕರೆದು ಕೊಂಡು ಬಂದಿರುವೆನು.''

ಈ ಮಾತನ್ನು ಕೇಳಿ ದುರ್ಗಾಪ್ರಸಾದನು—ತಾವು ಮಾಡಿರುವ ಆಲೋಚನೆಯು ಯುಕ್ತವಾಗಿರುವುದು. ತಮ್ಮ ಅಭಿಪ್ರಾಯದಂತೆಯೇ ನಡೆವುದಾದರೆ, ಎಲ್ಲರಿಗೂ ಕ್ಷೇಮವುಂಟು. ಆದುದರಿಂದ ನಾನೂ ತಮ್ಮಿಷ್ಟದಂತೆಯೇ ನಡೆದು ಕೊಳ್ಳುವೆನು, ಎಂದು ಹೇಳಿದ ಮಾತನ್ನು ಕೇಳಿ ನಾನು—ನಿಮ್ಮ ಯಜಮಾನನು ನಿಜವಾಗಿಯೂ ಜಮೀನ್ದಾರನು ಅಹುದೋ ಅಲ್ಲವೋ ಎಂಬ ವಿಷಯದಲ್ಲಿ ನೀವೇನು ಅಭಿಪ್ರಾಯ ಪಡುವಿರಿ ? ಎಂದೆನು.

ದುರ್ಗಾ—ಮಹಾಶಯ ! ನಾನು ಆವುದನ್ನೂ ನಿಶ್ಚಯಿಸಿಲ್ಲ. ಕಾರಣವೇನೆಂದರೆ, ಸಂಶಯ ಪಡಲು ನನಗೆ ಸಾಹಸವೇ ಉಂಟಾಗಲಿಲ್ಲ. ಆತನ ವಿಷಯದಲ್ಲಿ ಮೊದಲಿನಿಂದಲೂ ಒಂದು ಬಗೆಯಾದ ಅಭಿಪ್ರಾಯವು ನನ್ನ ಸಣ್ಣ ಹೃದಯದ ಒಂದೆಡೆಯಲ್ಲಿ ಇದ್ದೇ ಇದ್ದಿತು.

ನಾನು—ನಾನು ಈ ಕೆಲಸದಲ್ಲಿ ಕೈ ಹಾಕುವುದು ತಮಗೆ ಇಷ್ಟವೇ ?

ದುರ್ಗಾ—ಆಗಬಹುದು. ಈಗ ನನ್ನ ಇಷ್ಟವೂ ಅದೇ ಆಗಿರುವುದು.

ನಾನು—ಮೊದಲಿನಿಂದಲೂ ಆತನ ವಿಷಯದಲ್ಲಿ ತಮ್ಮ ಅಭಿಪ್ರಾಯವೇನಿದ್ದಿತು ? ತಿಳಿಸೋಣವಾಗಲಿ.

ದುರ್ಗಾ—ನಾನು ಈ ವಯಸ್ಸಿನಲ್ಲಿ ಎಷ್ಟೋ ಜಮೀನ್ದಾರರನ್ನು ನೋಡಿರುವೆನು. ಆರೂ ಈತನಂತೆ ಇದ್ದವರಲ್ಲ. ಈತನಂತೆ ದುಂದುಗಾರಿಕೆಯಿಂದಿರುವುದಾದರೆ, ಆವ ಜಮೀನ್ದಾರಿಯೂ ಉಳಿಯದು. ಈ ಆಲೋಚನೆಯು ನನಗೆ ಮೊದಲಿನಿಂದಲೂ ಹೊಳೆಯುತ್ತಿರುವುದು. ಆದರೂ ತಿಂಗಳ ಸಂಬಳವು ನನಗೆ ಸರಿಯಾಗಿ ಬರುತ್ತಿದ್ದರೆ ಸಾಕೆಂದು ನಾನು ದಿನಗಳನ್ನು ಕಳೆಯುತ್ತಿದ್ದೆನು.

ನಾನು—ನಿಮಗೆ ಸಂಬಳವೆಷ್ಟು?

ದುರ್ಗಾ—ತಿಂಗಳಿಗೆ ೫೦ ರೂಪಾಯಿಗಳ ಸಂಬಳವನ್ನು ಕೊಡುವುದಾಗಿ ಹೇಳಿದ್ದನು.

ನಾನು—ತಮ್ಮ ಹಾಗೆ ಎಷ್ಟು ಜನ ಕೆಲಸಗಾರರು ಇಲ್ಲಿ ಕೆಲಸ ಮಾಡಿಕೊಂಡಿರುವರು?

ದುರ್ಗಾ—ಇನ್ನೂ ನಾಲ್ಕಾರು ಜನರಿರುವರು. ಅವರು ತಮ್ಮ ತಮ್ಮ ಯೋಗ್ಯತೆಗೆ ತಕ್ಕ ಸಂಬಳಕ್ಕೆ ಸೇರಿಕೊಂಡು, ನನ್ನ ಕೈ ಕೆಳಗೆ ಕೆಲಸ ಮಾಡಿಕೊಂಡಿರುವರು. ಅವರೆಲ್ಲರಿಗೂ ನಾನೇ ಮುಖ್ಯಾಧಿಕಾರಿಯು.

ನಾನು—ಆತನು ಕೆಲಸಕ್ಕೆ ನಿಯಮಿಸಿಕೊಂಡಿರುವವರಲ್ಲಿ ಈ ಸ್ಥಲದವರು ಎಷ್ಟು, ಪರಸ್ಥಲದವರು ಎಷ್ಟು?

ದುರ್ಗಾ—ಆತನು ಆರನ್ನೂ ಕೆಲಸಕ್ಕೆ ನಿಯಮಿಸಿದವನಲ್ಲ.

ನಾನು—ಹಾಗಾದರೆ ನಿಯಮಿಸಿದವರಾರು?

ದುರ್ಗಾ—ಜಮೀದಾರನು ಬರುವುದಕ್ಕೆ ಒಂದು ತಿಂಗಳ ಮುಂಚೆಯೇ ಆತನ ಸರ್ವಾಧಿಕಾರಿಯೊಬ್ಬನು ಇಲ್ಲಿಗೆ ಬಂದು ಮೂರು ಮನೆಗಳನ್ನು ಬಾಡಿಗೆಗೆ ತೆಗೆದುಕೊಂಡು ನಮ್ಮಗಳನ್ನು ಕೆಲಸಕ್ಕೆ ನಿಯಮಿಸಿದನು.

ನಾನು—ನೀವು ಜಮೀದಾರನೊಡನೆ ಈ ವಿಷಯವಾಗಿ ಆವ ಮಾತುಕತೆಗಳನ್ನೂ ಆಡಲಿಲ್ಲವೇ?

ದುರ್ಗಾ—ಇಲ್ಲ; ಜಮೀದಾರನೊಡನೆ ಮಾತನಾಡುವುದಕ್ಕೆ ನಮಗೆ ಆವ ಅಧಿಕಾರವೂ ಇರಲಿಲ್ಲ. ಎಲ್ಲವೂ ಸರ್ವಾಧಿಕಾರಿಯ ಮುಖಾಂತರವಾಗಿಯೇ ನಡೆಯಬೇಕಾಗಿ ನಿಬಂಧನೆಯಾಗಿದ್ದಿತು.

ನಾನು—ಸರ್ವಾಧಿಕಾರಿಯಲ್ಲದೆ, ಆತನ ಕಡೆಯವರಾಗಿ ಮತ್ತಾರಾರು ಇದ್ದರು?

ದುರ್ಗಾ—ಇನ್ನೂ ಮೂರು ಜನರಿದ್ದರು. ಅವರೆಲ್ಲರೂ ಅವನ ಕಡೆಯವರಾದುದರಿಂದ, ಅವರಿಗೆ ಆವ ಅಡ್ಡಿಯೂ ಇರಲಿಲ್ಲ.

ನಾನು—ಜಮೀದಾರನ ಕಾರ್ಯಕಲಾಪವು ಇಲ್ಲಿ ಹೇಗೆ ನಡೆಯುತ್ತಿದ್ದಿತು? ಲೆಕ್ಕ ಪಕ್ಕಗಳೇನಾದರೂ ಉಂಟೋ?

ದುರ್ಗಾ—ಉಂಟು.

ನಾನು—ನಾನು ಅವುಗಳನ್ನು ನೋಡಬಹುದೇ?

ದುರ್ಗಾ—ಅದಕ್ಕಡ್ಡಿಯೇನು? ತಾವು ಅವಶ್ಯವಾಗಿಯೂ ನೋಡ ಬಹುದು.

ನಾನು—ಹಾಗಾದರೆ ಆ ಲೆಕ್ಕಪಕ್ಕಗಳೆಲ್ಲವನ್ನೂ ಇಲ್ಲಿಗೆ ತರಿಸೋಣ ವಾಗಲಿ.

ದುರ್ಗಾಪ್ರಸಾದನು ಲೆಕ್ಕಗಳನ್ನು ತರುವುದಕ್ಕಾಗಿ ಒಳಗೆ ಹೋದನು. ಅಷ್ಟರಲ್ಲಿ ಅಮರೇಂದ್ರನಾಥನು ನನ್ನನ್ನು ಕುರಿತು—ಆ ಲೆಕ್ಕವನ್ನು ನೋಡುವುದ ರಿಂದ ನಿನಗಾಗುವುದೇನು? ಎಂದನು.

ನಾನು—ನನಗೆ ಬೇರೆಯ ಉದ್ದೇಶವಿರುವುದು.

ಅಮರ—ಆ ಉದ್ದೇಶವೆಂಥದು? ನನಗೆ ತಿಳಿಸಬಾರದೇನು?

ನಾನು—ನಿನಗೆ ಈಗ ತಿಳಿಸಿ ಪ್ರಯೋಜನವಿಲ್ಲ.

ನಾನು ಹೀಗೆ ಹೇಳುತ್ತಿರುವಷ್ಟರಲ್ಲಿಯೇ ದುರ್ಗಾಪ್ರಸಾದನು ದಪ್ತರ ಗಳನ್ನು ತೆಗೆದುಕೊಂಡು ನಾವಿದ್ದಲ್ಲಿಗೆ ಬಂದನು. ನಾನು ಆ ಲೆಕ್ಕಗಳನ್ನು ಮನದಟ್ಟು ಮಾಡಿಕೊಂಡ ಬಳಿಕ, ನನ್ನ ಮಿತ್ರನೊಡನೆ ಆ ಮನೆಯನ್ನು ಬಿಟ್ಟು ಹೊರಗೆ ಬಂದೆನು.

ನಾವು ದಾರಿಯಲ್ಲಿ ಬರುತ್ತಿರುವಾಗ, ಅಮರೇಂದ್ರನು—ಶಶಾಂಕ! ಈಗ ನೀನೇನ ಮಾಡುವೆ? ನನ್ನನ್ನು ಉದ್ಧಾರ ಮಾಡುವುದಕ್ಕೆ ತಕ್ಕ ಉಪಾಯಗ ಳೇನಾದರೂ ಸಿಕ್ಕುವುವೇ? ಎಂದನು.

ನಾನು—(ನಸು ನಗುತ್ತೆ) ಅಮರ! ನೀನು ಈಗ ಮನೆಗೆ ಹೊರಡು. ಕಾರ್ಯಸಾಧನೆಯಲ್ಲಿ ಬೇಕುಬೇಕಾದ ವಿಷಯಗಳನ್ನು ಹವಣಿಸಿಕೊಳ್ಳುವುದಕ್ಕೆ ನಾನು ಹೊರಡುವೆನು. ಈ ಕಾರ್ಯದಲ್ಲಿ ನನ್ನಿಂದ ಎಷ್ಟು ಸಾಧ್ಯವೋ ಅಷ್ಟು ಸಾಹಾಯ್ಯವನ್ನು ಮಾಡುವೆನು.

ಅಮರ—ದಾರಿಯ ವೆಚ್ಚಕ್ಕೇನಾದರೂ—

ನಾನು—ಅದನ್ನು ಮುಂದೆ ನೋಡಿಕೊಳ್ಳುವ.

ಹೀಗೆ ಹೇಳಿ ನಾನು ಅಮರೇಂದ್ರನ ಅಪ್ಪಣೆಯನ್ನು ತೆಗೆದುಕೊಂಡು ನನ್ನ ಮನೆಗೆ ಹೊರಟು ಬಂದೆನು. ನನ್ನ ಮಿತ್ರನೂ ಪರಿಪರಿಯಾಗಿ ಚಿಂತಿಸುತ್ತಾ ತನ್ನ ಮನೆಯ ಕಡೆಗೆ ತೆರಳಿದನು.

---

## ಮೂರನೆಯ ವಿಲಾಸ

ನಾನು ಮನೆಗೆ ಬಂದ ಕೂಡಲೆ ವೇಷವನ್ನು ತೆಗೆದು ಹಾಕಿ, ವಿಶ್ರಾಂತಿಯನ್ನು ಹೊಂದುವುದಕೋಸ್ಕರ ನನ್ನ ಕೋಣೆಯಲ್ಲಿ ಒಂದು ಕುರ್ಚಿಯಮೇಲೆ ಕುಳಿತು ಕೊಂಡೆನು. ಅಷ್ಟು ಹೊತ್ತಿಗೆ ಸರಿಯಾಗಿ ಸೇವಕನೊಬ್ಬನು ಓಡಿ ಬಂದು ಕಾಗದ ವೊಂದನ್ನು ನನ್ನ ಕೈಗೆ ಕೊಟ್ಟನು. ಆಗ ನನ್ನ ಮನವು ಚಿಂತೆಗೀಡಾದ ಬಗೆ ಯೇನೆಂದರೆ—"ಇದೇನು ಸರ್ವನಾಶ! ಕೊಂಚ ಹೊತ್ತಾದರೂ ವಿಶ್ರಾಂತಿ ಯನ್ನು ಹೊಂದೋಣವೆಂದರೆ ಆಗುವುದೇ ಇಲ್ಲ. ಈ ಕಾಗದ ಬಂದಿರುವುದು ನೋಡಿದರೆ, ಈಗ ನಾನು ಡಿಲ್ಲಿಗೋ, ದ್ವೀಪಾಂತರಕ್ಕೋ, ಕಾಶಿಗೋ, ರಾಮೇಶ್ವ ರಕ್ಕೋ, ಇಲ್ಲವೇ ಎಲ್ಲಿಗೋ ಹೋಗಬೇಕಾಗುವುದು. ಪತ್ತೇದಾರಿಯ ಅಧಿಕಾರ ದಲ್ಲಿರುವವರಿಗೆ ಕಿಂಚಿತ್ತಾದರೂ ಸುಖವಿಲ್ಲ, ಶಾಂತಿಯಿಲ್ಲ. ಹೊತ್ತುಹೊತ್ತಿಗೆ ಊಟವಿಲ್ಲ, ರಾತ್ರಿಯಲ್ಲಿ ನಿದ್ದೆಯೆಂಬುದೇ ಇಲ್ಲ. ಹಗಲಿರುಳೂ ಕಳ್ಳಕಾಕರೊಡನೆ ಹೆಣಗಾಡುತ್ತಿರಬೇಕು—ಎಂದ ಮೇಲೆ, ಪ್ರಾಣವು ಆವಾಗಲೂ ತತ್ತರ ಗುಟ್ಟುತ್ತಲೇ ಇರುವುದು. ಎಲ್ಲರೂ ದ್ವೇಷಿಗಳಾಗುವರು ; ಆರೂ ನಮ್ಮನ್ನು ನಂಬರು. ಶರೀರದ ಆಯಾಸವಾದರೋ ಹೇಳಲೇ ಕೆಲಸವಿಲ್ಲ. ಬಲು ಮಾತಿ ನಿಂದೇನು? ಈ ತೊಂದರೆಗಳೆಲ್ಲವೂ ನನ್ನಂತೆಯೇ ಪತ್ತೇದಾರಿಯ ಅಧಿಕಾರ ದಲ್ಲಿರುವವರಿಗಲ್ಲದೆ ಮತ್ತಾರಿಗೂ ಗೊತ್ತಾಗುವ ಹಾಗೆಯೇ ಇಲ್ಲ."

ನಾನು ಈ ರೀತಿಯಾಗಿ ಚಿಂತಿಸಿದ ಬಳಿಕ ಕಾಗದವನ್ನು ಬಿಚ್ಚಿ ನೋಡಿದೆನು.

ಒಕ್ಕಣೆ.

"ಮಹಾಶಯ! ಈ ಕೂಡಲೆಯೇ ಅಧಿಕಾರಮಂದಿರಕ್ಕೆ ಬರಬೇಕು. ಕೆಲಸವಾದರೋ ಗುರುತರವಾಗಿರುವುದು. ಸಂಗತಿಗಳೆಲ್ಲವೂ ಮುಖತಃ ತಿಳಿಯ ಲಾದಾವು. ಪ್ರಧಾನಾಧಿಕಾರಿ.

ನಾನು ಈ ಕಾಗದವನ್ನು ಓದಿದ ಬಳಿಕ ದಡಬಡನೆ ಎದ್ದು ಭೋಜನಾದಿ ಗಳನ್ನು ತೀರಿಸಿಕೊಂಡು ಅಧಿಕಾರಮಂದಿರಕ್ಕೆ ಸರಿಯಾದ ಕಾಲಕ್ಕೆ ಬಂದು ಸೇರಿದೆನು. ಮಂದಿರದಲ್ಲಿ ಪ್ರಧಾನಾಧಿಕಾರಿಗಳು ನಾನು ಬರುವುದನ್ನೇ ಇದಿರು

ನೋಡುತ್ತಾ ಕುಳಿತಿದ್ದರು. ನಾನು ಅವರನ್ನು ಕಂಡಕೂಡಲೆ ಪ್ರಕೃತೋಚಿತ ವಾದ ಒಂದೆರಡು ಮಾತುಕತೆಗಳು ನಡೆದ ಬಳಿಕ, ಅವರು ಈ ರೀತಿಯಾಗಿ ಹೇಳಿದರು :—

"ರಾಮಪುರದ ಜಮೀನ್ದಾರಿಗೆ ಸೇರಿದ ಒಂದು ಗ್ರಾಮದ ನಿವಾಸಿಯೊಬ್ಬನು ನಿನ್ನನ್ನು ನಿರೀಕ್ಷಿಸಿಕೊಂಡಿರುವನು. ಅವನ ಸರ್ವಸ್ವವನ್ನೂ ಕಳ್ಳರು ಸೂರೆಗೊಂಡಿರುವರಂತೆ. ನೀನು ಆತನ ಸಲಹೆಗಳನ್ನು ತೆಗೆದುಕೊಂಡು ಈಗಲೇ ಹೊರಡು. ಏನಚ್ಚರಿ! ಕಳ್ಳರ ಹಾವಳಿಯನ್ನು ತಪ್ಪಿಸುವುದಕ್ಕೆ ನಾವು ಪ್ರಯತ್ನ ಪಟ್ಟಹಾಗೆಲ್ಲಾ, ಕಳ್ಳತನವು ದಿನದಿನಕ್ಕೆ ಹೆಚ್ಚುತ್ತಲೇ ಇರುವುದು. ನಮ್ಮನ್ನು ದೇವರೇ ರಕ್ಷಿಸಬೇಕು."

ನಾನು ಅಧಿಕಾರಿಯೊಡನೆ ಹೆಚ್ಚಾಗಿ ಮಾತನ್ನು ಬಳೆಯಿಸದೆ, ಆ ಅಪರಿಚಿತನಿದ್ದ ಸ್ಥಲಕ್ಕೆ ಹೋಗಿ ನೋಡಲಾಗಿ, ಅವನು ಶೂನ್ಯ ಮನಸ್ಕನಾಗಿ ಮುಖವನ್ನು ಜೋಲು ಹಾಕಿ, ತಲೆಯ ಮೇಲೆ ಕೈಗಳನ್ನಿಟ್ಟುಕೊಂಡು ಕುಳಿತಿದ್ದನು. ನಾನು ಆತನ ಬಳಿಗೆ ಹೋದ ಕೂಡಲೆ, ಆತನು ತಲೆಯೆತ್ತಿ—ಮಹಾಶಯ! ದೊಡ್ಡ ಅಧಿಕಾರಿಗಳು ತಮ್ಮನ್ನಲ್ಲವೇ ನನ್ನಲ್ಲಿಗೆ ಕಳುಹಿರುವುದು? ನನ್ನನ್ನು ಈ ದುರಂತವಾದ ವಿಪತ್ತಿನಿಂದ ಉದ್ಧಾರಮಾಡಲು ನಿಮಗೆ ಸಾಧ್ಯವೇ? ಎಂದು ಕೇಳಿದನು.

ನಾನು ಆತನ ಮನೋವ್ಯಥೆಯನ್ನು ನೋಡಿ:—ನೀವು ಇಷ್ಟೊಂದು ಕಾತರರಾಗಲು ಕಾರಣವೇನು? ಕೆಲಸವೇನೋ ನಡೆದು ಹೋದುದು. ನಾವು ಆವ ವಿಧವಾದ ಪ್ರಯತ್ನವನ್ನೂ ಮಾಡದೆ ವ್ಯರ್ಥವಾಗಿ ವ್ಯಸನಪಡುವುದರಿಂದ ಪ್ರಯೋಜನವೇನು? ಸರಕಾರದವರು ಜನಗಳ ವ್ಯಸನವನ್ನು ಪರಿಹಾರ ಮಾಡುವುದಕ್ಕಾಗಿಯೇ, ಅನೇಕವಾದ ಇಲಾಖೆಗಳನ್ನು ಏರ್ಪಡಿಸಿರುವರು. ಅವುಗಳ ಕಾರ್ಯ ನಿರ್ವಾಹಕ್ಕಾಗಿ ಅಧಿಕಾರಿಗಳಿಗೆ ಬೇಕು ಬೇಕಾದಹಾಗೆ ಸಂಬಳಗಳನ್ನು ಸಲ್ಲಿಸುತ್ತಿರುವರು. ಹೀಗಿರುವಲ್ಲಿ ನೀವು ಚಿಂತಿಸತಕ್ಕ ಕೆಲಸವಿಲ್ಲ. ದೈವದ ಮೇಲೆ ಭಾರಹಾಕಿ ನಾವು ಕೆಲಸಮಾಡಿ ನೋಡುವೆವು. ಬಳಿಕ ನಿಮ್ಮ ಅದೃಷ್ಟದಲ್ಲಿದ್ದಂತಾಗುವುದು. ಹೀಗಿರುವಲ್ಲಿ ಇದಕ್ಕಾಗಿ ನೀವು ಏತಕೆ ಚಿಂತಿಸಬೇಕು? ಎಂದು ಹೇಳಿ ಅವರನ್ನು ಒಂದು ಕಡೆಯಲ್ಲಿ ಕುಳ್ಳಿರಿಸಿದನು. ಪದಾರ್ಥವನ್ನು ಕಳೆದುಕೊಂಡ ವ್ಯಸನ ಹಾಗಿರಲಿ, ನನ್ನ ಮಾತ ಕೇಳಿದಮೇಲೆ ಅವರಿಗೆ ಪರಮಾನಂದವಾಯಿತು. ಅವರು ನಿಟ್ಟುಸಿರನ್ನು ಬಿಟ್ಟು ನನ್ನನ್ನೇ ನೋಡುತ್ತಾ ಕುಳಿತು ಕೊಂಡರು. ನಾನು ಕೊಂಚ ಹೊತ್ತಿನಮೇಲೆ ಅವರನ್ನು ಕುರಿತು—ನಿಮ್ಮ ಹೆಸರೇನು? ಎಂದು ಕೇಳಿದೆನು.

ಅಪರಿಚಿತ—ನನ್ನನ್ನು ವಿನಯ ಚಂದ್ರನೆಂದು ಕರೆವರು.

ನಾನು—ವಾಸವಾಗಿರುವುದೆಲ್ಲಿ ?

ವಿನಯಚಂದ್ರ—ಹರವಾಡಿ ಗ್ರಾಮದಲ್ಲಿ.

ನಾನು—ತಾವು ಇಲ್ಲಿಗೆ ಬಂದುದೇತಕೆ ?

ವಿನಯ—ಮಹಾಶಯ ! ನಾನು ಏನ ಹೇಳಲಿ? ನನಗೆ ಉಂಟಾಗಿರತಕ್ಕ ವಿಪತ್ತನ್ನು ನಾನೇನೆಂದು ವರ್ಣಿಸಲಿ ? ನಾನು ರಾಮಪುರದ ಜಮೀನ್ದಾರರಾದ ಶ್ರೀಯುತ ರಾಜರಾಜೇಶ್ವರ ಚಕ್ರವರ್ತಿಯವರ ಸರ್ವಾಧಿಕಾರಿ. ಇನ್ನು ಎಂಟು ದಿನಕ್ಕೆ ಅವರದೊಂದು ಮೊಕದ್ದಮೆಯು ಈ ಊರಿನ ನ್ಯಾಯಸ್ಥಾನದಲ್ಲಿ ಹಿಯರಿಂಗಿಗೆ ಇರುವದು. ಪ್ರತಿವಾದಿಗಳು ಕೇಸು ತಮ್ಮಕಡೆಯಾಗಬೇಕೆಂಬುದಾಗಿ ಏನೇನೋ ಪ್ರಯತ್ನ ಮಾಡುತ್ತಿರುವರು. ಮೊಕದ್ದಮೆಯನ್ನು ನಡೆಯಿಸುವುದಕ್ಕಾಗಿ ಹೈಕೋರ್ಟು ವಕೀಲರೊಬ್ಬರನ್ನು ನಿಯಮಿಸಿಕೊಳ್ಳಬೇಕೆಂದು ನಾನು ಮುಂದಾಗಿಯೇ ಇಲ್ಲಿಗೆ ಬರಬೇಕಾಯಿತು. ವಕೀಲರಿಗೆ ಕೊಡುವುದಕ್ಕಾಗಿಯೂ, ನನ್ನ ದಾರಿಯ ವೆಚ್ಚಕ್ಕಾಗಿಯೂ ನಮ್ಮ ಜಮೀನ್ದಾರರು ಹತ್ತು ಸಾವಿರ ರೂಪಾಯಿಗಳನ್ನು ಕೊಟ್ಟಿದ್ದರು. ಮಹಾಶಯ! ನನಗೆ ಸರ್ವನಾಶವಾಗಿ ಹೋಯಿತು. ನನ್ನ ಹತ್ತು ಸಾವಿರ ರೂಪಾಯಿಗಳೂ ಕಳ್ಳರ ಪಾಲಾದುವು. ಕಾಗದ ಪತ್ರಗಳೆಲ್ಲವೂ ನನ್ನಲ್ಲಿಯೇ ಉಳಿದಿರುವುವು ; ವಿಷ ತೆಗೆದುಕೊಳ್ಳುವುದಕ್ಕೆ ಕೂಡಾ ನನ್ನಲ್ಲಿ ಒಂದು ಕಾಸೂ ಇಲ್ಲದಂತಾಯಿತು. ಇದು ಹಾಗಿರಲಿ. ನಮ್ಮ ದಣಿಗಳು ಹಣಕಾಸಿನ ವಿಷಯದಲ್ಲಿ ಬಹುಕಠಿನರು. ಮನೆ, ಮಠ, ಜಮೀನು ಸಮೀನು, ಏನಿದ್ದರೂ ಹರಾಜುಮಾಡಿ ತಮ್ಮ ಹಣವನ್ನು ಬರಮಾಡಿಕೊಳ್ಳುವರು. ನನ್ನ ಜೀವನದ ಬಾಯಿಗೆ ಮಣ್ಣು ಬಿತ್ತು. ಹಾಗೂ ಹೆಂಡಿತಿ ಮಕ್ಕಳು ಹೊಟ್ಟೆಗಿಲ್ಲದೆ ಸಾಯುವ ಹೊತ್ತು ಬಂದಿತು. ಹಾ ದೈವವೇ! ನನಗೆ ಈ ಸಮಯದಲ್ಲಿ ಮರಣವುಂಟಾಗಬಾರದೇ ? ಎಂದು ಹೇಳುತೆ ಹೇಳುತೆ ಮಕ್ಕಳಂತೆ ಗಳಗಳನೆ ಅಳತೊಡಗಿದನು.

ವಿನಯಚಂದ್ರನ ದುರವಸ್ಥೆಯನ್ನು ನೋಡಿ ನನ್ನ ಮನಸ್ಸು ಕರಗಿತು. ಆದರೂ ನಾನು ಧೈರ್ಯವನ್ನು ತೆಗೆದುಕೊಂಡು—ಸ್ವಾಮಿ, ನೀವು ಇಷ್ಟು ಅಧೀರರಾಗಬೇಡಿರಿ. ನಾನು ಕೇಳತಕ್ಕ ಪ್ರಶ್ನೆಗಳಿಗೆಲ್ಲಾ ಸರಿಯಾಗಿ ಉತ್ತರವನ್ನು ಕೊಡಿರಿ. ಕಳೆದು ಹೋಗಿರುವ ನಿಮ್ಮ ಹಣವನ್ನು ನಾನು ಉದ್ಧಾರಮಾಡಿ ಕೊಡುವೆನು, ಎಂದು ಹೇಳಿದ ಮಾತನ್ನು ಕೇಳಿ ವಿನಯಚಂದ್ರನು ಬಲು ಸಂತೋಷಪಟ್ಟವನಾಗಿ ಓಡಿ ಬಂದು ನನ್ನ ಎರಡು ಕಾಲುಗಳನ್ನೂ ಗಟ್ಟಿಯಾಗಿ

ಹಿಡಿದುಕೊಂಡನು. ನಾನು ಆತನನ್ನು ಮತ್ತಷ್ಟು ಸಂತೈಸಿ ಮೊದಲಿನಂತೆ ಕುಳ್ಳಿರಿಸಿದೆನು. ಆ ಮೇಲೆ ಆತನನ್ನು ಕುರಿತು—ಮಹಾಶಯ! ಈ ನಗರದಲ್ಲಿ ತಮಗೆ ಪರಿಚಿತರಾರಾದರೂ ಉಂಟೇ! ಎಂದು ಕೇಳಿದೆನು.

ವಿನಯ—ಇಲ್ಲ; ಆರೂ ಇಲ್ಲ. ನಾನು ಆವಾಗಲೂ ಈ ನಗರಕ್ಕೆ ಬಂದವನಲ್ಲ. ನಾನು ಇಲ್ಲಿಗೆ ಇದೇ ಮೊದಲು ಬಂದುದು. ಎಷ್ಟೋ ದಿವಸಕ್ಕೆ ಮೊದಲು ನಾನು ಇಲ್ಲಿಗೆ ಬರಬೇಕೆಂದು ನಿಶ್ಚಯವಾಗಿದ್ದಾಗ, ನನಗೆ ಬಲವತ್ತರವಾದ ಜ್ವರವು ಬಂದಿದ್ದಿತು. ಅಂದು ಮೊದಲು ನಾನು ಇಲ್ಲಿಗೆ ಬರಬೇಕೆಂಬ ಇಷ್ಟವುಳ್ಳವನಾಗಲೇ ಇಲ್ಲ. ಈಗ ಯತ್ನವಿಲ್ಲದೆಯೇ ಇಲ್ಲಿಗೆ ಬರಬೇಕಾಯಿತು.

ನಾನು—ಇಲ್ಲಿ ಯಾರಲ್ಲಿಗೆ ಬರಬೇಕೆಂದು ಸಂಕಲ್ಪವಾಗಿದ್ದಿತು?

ವಿನಯ—ಇಲ್ಲಿ ಒಬ್ಬ ಬುದ್ಧಿಶಾಲಿಯಾದ ಹೈಕೋರ್ಟು ವಕೀಲನ ಬಳಿಗೆ ಹೋಗಬೇಕೆಂದು ನಿಶ್ಚಯಿಸಿದ್ದೆನು.

ನಾನು—ತಾವು ಈ ಊರಿಗೆ ಎಷ್ಟು ಹೊತ್ತಿಗೆ ಬಂದು ಸೇರೋಣವಾಯಿತು?

ವಿನಯ—ನೆನ್ನೆ ರಾತ್ರಿ ಹನ್ನೊಂದು ಗಂಟೆ ಸಮಯದಲ್ಲಿ.

ನಾನು—ಆ ಮೇಲೆ.

ವಿನಯ—ನಾನು ಇಲ್ಲಿಗೆ ಬಂದು ರೈಲಿನಿಂದ ಇಳಿದಮೇಲೆ ಒಂದು ಗಾಡಿಯನ್ನು ಬಾಡಿಗೆಗೆ ತೆಗೆದುಕೊಳ್ಳುವುದಕ್ಕೆ ಹುಡುಕುತ್ತಿದ್ದೆನು. ಅಷ್ಟು ಹೊತ್ತಿಗೆ ಸರಿಯಾಗಿ ಅಪರಿಚಿತನೊಬ್ಬನು ಹಿಂದಿನಿಂದ ಬಂದು ನನ್ನನ್ನು ಪರಿಚಿತನಂತೆ—ಮಹಾಶಯ! ತಮ್ಮ ಹೆಸರು ವಿನಯಚಂದ್ರನೆಂದಲ್ಲವೇ? ತಾವು ರಾಮನಗರದ ಜಮೀನ್ದಾರರಾದ ಶ್ರೀಯುತ ರಾಜರಾಜೇಶ್ವರ ಚಕ್ರವರ್ತಿಯವರ ಕಡೆಯರಾಗಿ ಇಲ್ಲಿಗೆ ಬರುತ್ತಿಲ್ಲವೇ? ಎಂದು ಮಾತನಾಡಿಸಿದನು. ಹೀಗೆ ಮಾತನಾಡಿಸಿದ ಅಪರಿಚಿತ ವ್ಯಕ್ತಿಯನ್ನು ನಾನೆಂದೂ ನೋಡಿದವನಲ್ಲ. ಆತನು ಇದ್ದ ಸಂಗತಿಯನ್ನು ಇದ್ದಹಾಗೆ ಹೇಳಿದುದು ನೋಡಿದರೆ, ಆತನಾರೋ ಪರಿಚಿತನೇ ಆಗಿರಬೇಕೆಂದು ನಾನು ಊಹಿಸಿ ಕೊಂಡೆನು.

ನಾನು—ಆ ಅಪರಿಚಿತನನ್ನು ತಾವು ಮೊದಲು ಎಲ್ಲಿಯಾದರೂ ನೋಡಿರಬಹುದೇ, ಇಲ್ಲವೇ, ಚೆನ್ನಾಗಿ ಜ್ಞಾಪಿಸಿಕೊಳ್ಳಿರಿ.

ವಿನಯ—ನಾನು ಎಷ್ಟೋ ಜ್ಞಾಪಿಸಿಕೊಂಡೆನು. ಆದರೂ ನಾನು ಆತನನ್ನು ಎಂದಿಗೂ ನೋಡಿದ್ದಂತೆ ಕಂಡು ಬರುತ್ತಿಲ್ಲ.

ನಾನು ಬಹಳ ಹೊತ್ತು ಏನೇನೋ ಚಿಂತಿಸ ತೊಡಗಿದೆನು. ಶ್ರೀಮಾ್ ವಿನಯ ಚಂದ್ರನು ನನ್ನ ಮುಖವನ್ನೇ ನೋಡುತ್ತಾ ಕುಳಿತಿದ್ದನು. ಆ ಅಪರಿ ಚಿತನು ಇಷ್ಟು ಆದರದಿಂದ ಕುಲಗೋತ್ರಗಳನ್ನು ವಿಚಾರಿಸಬೇಕಾದರೆ ಕಾರಣ ವೇನಿರಬಹುದೆಂದು ನನಗೆ ಚಿಂತೆಗಿಟ್ಟಿತು.

---

## ನಾಲ್ಕನೆಯ ವಿಲಾಸ

ನಾನು ಬಹಳ ಕಾಲ ಚಿಂತಿಸುತ್ತಿದ್ದು—ಮಹಾಶಯ ! ರೈಲಿನಲ್ಲಿ ತಾವು ಮತ್ತಾರೊಡನೆಯಾದರೂ ಮಾತನಾಡುತ್ತಿದ್ದಿರಾ ? ಎಂದು ಕೇಳಿದೆನು.

ವಿನಯ—ರೈಲಿನಲ್ಲಿ ಮಾತನಾಡುವುದಕ್ಕೆ ಕಡಮೆಯೇ ? ಆರಾರ ಜತೆಯಲ್ಲಿಯೋ ಮಾತನಾಡುತ್ತಿದ್ದೆನು.

ನಾನು—ನೀವು ಇಲ್ಲಿಗೆ ಬರುವುದಕ್ಕೆ ಕಾರಣವನ್ನು ಆರ ಮುಂದಾದರೂ ಹೇಳಿದಿರಾ ?

ವಿನಯ—ಅಹುದು, ಹೇಳಿದೆನು.

ನಾನು—ನಿಮ್ಮಲ್ಲಿ ಇಷ್ಟು ಹಣವಿದೆ ಎಂಬುದು ಮಾತಿನ ಸಂದರ್ಭದಲ್ಲಿ ಹೊರಪಟ್ಟಿತೇನು ?

ವಿನಯ—ಬಾಯಿತಪ್ಪಿ ಹೊರಟಿದ್ದರೂ ಹೊರಟಿರಬಹುದು.

ನಾನು—ಇದಕ್ಕೆ ಮೊದಲು ನೀವು ಈ ನಗರವನ್ನು ನೋಡಿಲ್ಲವೆಂಬ ಸಂಗತಿ ?

ವಿನಯ—ಆಹಾ, ಅದನ್ನೂ ಹೇಳಿರುವೆನು. ನಾನು ಆರೊಡನೆ ಮಾತನಾಡುತ್ತಿದ್ದೆನೋ, ಆತನು ಬಹಳ ದೊಡ್ಡ ಮನುಷ್ಯನು. ಆತನಲ್ಲಿ ಕೃತ್ರಿಮವೆಂಬುದೇ ಇರಲಿಲ್ಲ. ನಾನು ಆತನೊಡನೆ: ಕಾಲೋಚಿತವಾಗಿ ಏನೇನೋ ಮಾತನಾಡಿರುವೆನು. ಅವೆಲ್ಲವನ್ನೂ ಈಗ ತಿಳಿದು ಹೇಳುವುದಕ್ಕಾಗುವುದಿಲ್ಲ. ಆತನಿಂದ ನಾನು ಈ ನಗರದ ವಿಷಯವಾಗಿ ಬಹಳ ಸಂಗತಿಗಳನ್ನು ತಿಳಿದುಕೊಂಡೆನು. ಆತನು ಯೋಗ್ಯನಾದ ವಕೀಲನೊಬ್ಬನನ್ನು

ಹೊಂದಿಸಿ ಕೊಡುವುದಾಗಿಯೂ ಹೇಳಿದನು. ಇಷ್ಟೇ ಅಲ್ಲದೆ, ಮೊಕದ್ದಮೆಯ ವಿಚಾರದಲ್ಲಿಯೂ ಬಲು ಸಲಹೆಗಳನ್ನು ಕೊಟ್ಟನು. ಆತನ ಸಲಹೆಗಳಿಂದಲೇ ನನಗೆ ಬಹಳವಾಗಿ ಧೈರ್ಯವುಂಟಾಗಿರುವುದು.

ನಾನು—ತಾವು ಈ ರಾತ್ರಿಯಲ್ಲಿ ಎಲ್ಲಿರುವಿರಿ, ಎಲ್ಲಿಗೆ ಹೋಗುವಿರಿ, ಎಂಬುದನ್ನು ಕುರಿತು ಆತನಿಗೆ ತಿಳಿಸಿದಿರೋ ?

ವಿನಯ—ತಿಳಿಸಿದೆನು. ಅದಕ್ಕೆ ಅವರು ಹೇಳಿದುದು—"ನೀವು ಊರಿನ ಮಧ್ಯದಲ್ಲಿ ಹೋಗಿರಬೇಕಾದುದಿಲ್ಲ. ಹೊಗೆ ಬಂಡಿಯ ನಿಲ್ದಾಣದ ಹತ್ತಿರವೇ ಒಂದು ಧರ್ಮಶಾಲೆ ಇರುವುದು. ಅಲ್ಲಿಗೆ ಹೋದರೆ ಎಲ್ಲಾ ಅನುಕೂಲತೆಗಳೂ ದೊರೆವುವು. ರಾತ್ರಿಯಲ್ಲಿ ಅಲ್ಲಿದ್ದು ಬೆಳಕು ಹರಿದಮೇಲೆ ವಕೀಲನನ್ನು ಹುಡುಕಿಕೊಂಡು ಹೋಗಬಹುದು. ನಾನು ಹೇಳಿದ ವಕೀಲನೂ ಸಮೀಪದಲ್ಲಿಯೇ ವಾಸವಾಗಿರುವನು.

ನಾನು—ನೀವು ಹೇಳುವ ಮನುಷ್ಯನು ನಿಮ್ಮೊಡನೆ ಇಲ್ಲಿಗೆ ಬಂದನೋ?

ವಿನಯ—ಇಲ್ಲ; ಅವರು ಎರಡು ಮೂರು ಸ್ಟೇಷನ್ನುಗಳಿರುವಾಗಲೇ ಇಳಿದುಬಿಟ್ಟರು. ಅವರು ಇಳಿಯುವಾಗ—"ಇಲ್ಲಿ ನಮ್ಮ ಅತ್ತೆಯ ಮನೆ ಇರುವುದು ; ಈ ರಾತ್ರಿ ಇಲ್ಲಿದ್ದು ನಾಳೆ ಬೆಳಿಗ್ಗೆ ಹೊರಟು ಬರುವೆನು. ಮುಖ್ಯವಾಗಿ ತಮ್ಮ ದಯೆ ಇರಬೇಕು" ಎಂದು ಹೇಳಿ ಹೊರಟು ಹೋದರು.

ಈ ಮಾತ ಕೇಳಿ ನನಗೆ ನಗೆ ಬಂದಿತು. ನಾನು ನಗು ನಗುತೆ ಹೇಳ ತೊಡಗಿದೆನು—"ಆ ಮನುಷ್ಯರಲ್ಲಿ ತಮಗೆ ವಿಶೇಷ ಗೌರವವು ಉಂಟಾಗಿರುವುದು. ಅವರು ನಿಮ್ಮನ್ನು ಚೆನ್ನಾಗಿಯೂ ಪರೀಕ್ಷಿಸಿ ತಿಳಿದು ಕೊಂಡಿರುವರು. ಒಂದು ವೇಳೆ ನೀವವರನ್ನು ಮರೆತರೂ ಅವರು ಮಟ್ಟಿಗೆ ನಿಮ್ಮನ್ನು ಮರೆಯುವಂತಿಲ್ಲ. ಅವರು ಇಲ್ಲಿಗೆ ಬಂದ ಕೂಡಲೇ ನಿಮಗೆ ಗಂಟು ಬೀಳುವರು. ಬಳಿಕ ಬೆನ್ನ ಹತ್ತಿದ ಬೇತಾಳದಂತೆ ಅವರನ್ನು ನೀವು ಎಲ್ಲೆಲ್ಲಿಯೂ ನೋಡುತ್ತಿರ ಬಹುದು."

ವಿನಯ—(ಆಶ್ಚರ್ಯಗೊಂಡವನಾಗಿ) ಅದೇನು ಮಹಾಶಯ ! ಆ ಮನುಷ್ಯರಾರು ? ದಯೆಯಿಟ್ಟು ನನಗೆ ತಿಳಿಸೋಣವಾಗಲಿ.

ನಾನು ಮತ್ತೆ ಮತ್ತೆ ನಗುತ್ತ ಇಂತೆಂದೆನು.—"ಅವರು ಗಾಡಿಯಿಂದ ಇಳಿದುದನ್ನು ಮಾತ್ರವೇ ನೀವು ನೋಡಿದಿರಿ. ಆಮೇಲೆ ನೀವು ಅವರನ್ನು ನೋಡಲಿಲ್ಲ. ಅವರು ನಿಮ್ಮ ಗಾಡಿಯಿಂದಿಳಿದು ಬೇರೆಯ ಗಾಡಿಯಲ್ಲಿ ಕುಳಿತು ನಿಮ್ಮೊಡನೆಯೇ ಇಲ್ಲಿಗೆ ಪ್ರಯಾಣಮಾಡಿ ಬಂದರು. ಅವರು ನಿಮ್ಮನ್ನು

ಚೆನ್ನಾಗಿಯೂ ಗುರ್ತಿಸಿರುವುದರಿಂದ, ನೀವು ರೈಲು ಇಳಿದ ಕೂಡಲೇ ಅವರು ನಿಮ್ಮಲ್ಲಿಗೆ ಬಂದು ನೀವು ಹಿಂದೆ ಹೇಳಿದಂತೆ ಪ್ರಶ್ನೆ ಮಾಡಿರುವರು.

ವಿನಯ ಚಂದ್ರನು ಮಾತಿಲ್ಲದವನಾಗಿ ನನ್ನ ಕಡೆ ಒಂದೇ ದೃಷ್ಟಿಯಿಂದ ನೋಡುತ್ತಾ ನಿಟ್ಟುಸಿರನ್ನು ಬಿಟ್ಟು ನನ್ನೊಡನೆ ಮಾತನಾಡಿದನು—"ಈಗ ಎಲ್ಲವೂ ಗೊತ್ತಾಗುತ್ತಿರುವುದು. ಆತನು ರೈಲಿನಲ್ಲಿ ನನ್ನೊಡನೆ ಬಹಳ ಆದರದಿಂದ ಮಾತನಾಡುತಿದ್ದುದೂ, ಮೇಲೆ ಮೇಲೆ ಪ್ರಶ್ನೆ ಹಾಕುತಿದ್ದುದೂ, ಇದಕ್ಕಾಗಿಯೇ ಎಂದು ಗೊತ್ತಾಯಿತು. ಆತನು ತನಗೆ ಬೇಕಾದ ಸಂಗತಿಗಳೆಲ್ಲವನ್ನೂ ತಿಳಿದುಕೊಂಡು ಈ ರೀತಿಯಾಗಿ ಚೇಷ್ಟೆಯನ್ನು ಮಾಡಿರುವನು. ಆತನ ಶೀಲ ಸ್ವಭಾವಗಳು ನನಗೆ ಮೊದಲೇ ಗೊತ್ತಾಗಿದ್ದಿದ್ದರೆ, ಆರು ಆತನೊಡನೆ ಮಾತನಾಡುತ್ತಿದ್ದರು? ನನಗಾದರೋ ಈಗಣ ಕಾಲದ ಜನರ ಸ್ವಭಾವವೇ ಗೊತ್ತಾಗುವುದಿಲ್ಲ. ಅಯ್ಯೋ! ನಾನು ಆತನ ವೇಷ ಭಾಷೆಗಳಿಗೆ ಬೆರಗಾದೆನಲ್ಲಾ! ಈಗಣ ಕಾಲದಲ್ಲಿ ಜನರ ಸ್ವಭಾವವು ಒಳಗೊಂದು ಬಗೆಯಾಗಿಯೂ, ಹೊರಗೊಂದು ಬಗೆಯಾಗಿಯೂ ಇರುವುದಾದರೆ, ಕೃತ್ರಿಮವನ್ನರಿಯದ ನಮ್ಮಂಥವರು ಇತರರೊಡನೆ ಸೇರುವ ಬಗೆ ಹೇಗೆ? ಈ ಕಾಲವು ನಿಜವಾಗಿಯೂ ನಮ್ಮಂಥವರಿಗಲ್ಲ. ಹಾ ವಿಧಿಯೇ! ನನ್ನನ್ನು ಬೇಗನೆ ಈ ಲೋಕದಿಂದ ಪಾರಗಾಣಿಸಬಾರದೇ?" ಎಂದು ಧಾರಾಕಾರವಾಗಿ ಕಣ್ಣುಗಳಿಂದ ನೀರನ್ನು ಸುರಿಸಿದನು.

ನಾನು—ಇಂಥಹ ವೈರಾಗ್ಯದ ಮಾತು ಹಾಗಿರಲಿ. ಕುಲಶೀಲಗಳು ಗೊತ್ತಿಲ್ಲದೆಯೇ ಆರೊಡನೆ ನೀವು ಬಹುಕಾಲ ಪರಿಚಯವಿದ್ದವರಂತೆ, ನಿಮ್ಮ ಅಂತರ್ಯವನ್ನೆಲ್ಲವನ್ನೂ ಹೊರಪಡಿಸಿದಿರೋ, ಆ ಮಹಾಪುರುಷನ ಆಗಣ ಕಾಲದ ವೇಷವು ಎಂಥಹದಾಗಿದ್ದಿತು?

ವಿನಯ—ವೇಷವೇ, ಹೃದಯಂಗಮವಾಗಿದ್ದಿತು. ಮಾತು ಕತೆಗಳು ವೇಷಕ್ಕೆ ತಕ್ಕಂತೆಯೇ ಇದ್ದುವು. ಅಲ್ಲದೆಯೂ ಆತನು ಬಲು ಸುಂದರನೂ, ಆಜಾನುಬಾಹುವೂ ಆಗಿದ್ದನು. ಆತನ ಬೆರಳುಗಳಲ್ಲಿ ಅಮೂಲ್ಯವಾದ ಉಂಗುರಗಳು ನೋಟಕರ ಮನಸ್ಸನ್ನು ಎಳೆಯುತ್ತಿದ್ದುವು. ಈಗಣ ಕಾಲದ ದೊಡ್ಡತನಕ್ಕೆ ಸರಿಯಾಗಿ ಆತನ ಕೈಯ್ಯಲ್ಲಿ ಒಂದು ಬೆತ್ತದ ಛಡಿಯು ಇದ್ದಿತು. ಆತನನ್ನು ನೋಡಿದವರೆಲ್ಲರೂ ಈತನಾರೋ ದೊಡ್ಡ ಜಮಿೀನ್ದಾರನಿರಬೇಕೆಂದು ತಿಳಿದುಕೊಳ್ಳುವಷ್ಟು ದೊಡ್ಡ ತನವು ಆತನಲ್ಲಿ ಕಾಣಬರುತ್ತಿದ್ದಿತು.

---

## ಐದನೆಯ ವಿಲಾಸ

ವಿನಯಚಂದ್ರನು ಈರೀತಿಯಾಗಿ ಹೇಳಿದುದನ್ನು ಕೇಳಿ, ನಾನು ಇಂತೆಂದೆನು—"ಸ್ವಾಮಿ, ತಾವು ಮೇಲಿನ ಆಕಾರದಿಂದಲೇ ಬೆರಗಾದಿರೆಂದು ತೋರುತ್ತದೆ. ತಾವು ಹಳ್ಳಿಗಳನ್ನು ಬಿಟ್ಟು ಎಂದೂ ದೊಡ್ಡ ದೊಡ್ಡ ಪಟ್ಟಣಗಳಿಗೆ ಬಂದವರಲ್ಲ. ಆದುದರಿಂದಲೇ ಬೆಳ್ಳಗಿರುವುದೆಲ್ಲಾ ಹಾಲೆಂಬ ಭ್ರಾಂತಿಯು ನಿಮಗೆ ಸಹಜವಾಗಿಯೇ ಇರುವುದು. ಇಂಥಹ ನಗರಗಳಲ್ಲಿ ಅಪರಿಚಿತರಾರಾದರೂ ಕೇವಲ ಆದರದಿಂದ ವಿಶೇಷವಾಗಿ ಮಾತು ಕತೆಗಳನ್ನಾಡಿಸುವುದಾದರೆ, ಅದರಲ್ಲಿ ಗೋಪ್ಯವಾದ ಉದ್ದೇಶವೇನಾದರೂ ಇದ್ದೇ ಇರಬೇಕೆಂದು ಊಹಿಸುವುದು ಯುಕ್ತವಾಗಿಯೇ ಇರುವುದು. ಈ ರೀತಿಯಾಗಿ ದೊಡ್ಡಮನುಷ್ಯರಂತೆ ನಟನೆಮಾಡತಕ್ಕವರನ್ನು ಹಗಲುಗಳ್ಳರೆಂದು ಹೇಳಿದರೂ ಹೇಳಬಹುದು. ಇಂತಹ ವೇಷಧಾರಿಗಳು ಮಾಡದ ಕೆಲಸವು ಮೂರು ಲೋಕದಲ್ಲಿ ಆವುದೂ ಇರುವುದಿಲ್ಲ. ಈ ನಗರದಲ್ಲಾದರೋ ಅಂತಹ ಹಗಲುಗಳ್ಳರು ಅನೇಕರಿರುವರು. ನಾನು ಅಂತಹ ಎಷ್ಟೋ ಜನರನ್ನು ಕಣ್ಣಾರೆ ನೋಡಿರುವೆನು. ಅವರಲ್ಲಿ ಎಷ್ಟು ಜನ ಎಷ್ಟುಸಲ ಬಂದೀಖಾನೆಯ ಹೊಸಲನ್ನು ತುಳಿದು ಬಂದಿರುವರೋ ಅದನ್ನು ಮಟ್ಟಿಗೆ ತಿಳಿದು ಹೇಳುವುದಕ್ಕಾಗುವುದಿಲ್ಲ, ನಮ್ಮಗಳನ್ನು ನೋಡಿದ ಕೂಡಲೇ ಅವರು ಭಯದಿಂದ ಎಲ್ಲಿದ್ದವರು ಅಲ್ಲಿಯೇ ಅಡಗಿಕ್ಕೊಂಡು ಬಿಡುವರು. ಅವರಲ್ಲಿ ನಿಪುಣರಾದ ಕೆಲವರು ನಾವು ಮಾಡತಕ್ಕ ಕೆಲಸಗಳಿಗೆ ಪ್ರತಿಯಾಗಿಯೇ ಮಾಡಿಕೊಂಡು ಆರ ಕೈಗೂ ಸಿಕ್ಕದೆ ದಿನಗಳನ್ನು ಕಳೆಯುತ್ತಿರುವರು. ಹಗಲುಗಳ್ಳರಲ್ಲಿ ಕೆಲವರು ಕಳ್ಳತನದಲ್ಲಿ ಮಾತ್ರವೇ ಪಾರಂಗತರೆಂದು ಹೇಳುವುದಕ್ಕಾಗುವುದಿಲ್ಲ. ಅವರು ಕಾಲೋಚಿತವಾದ ವಿದ್ಯೆಗಳಲ್ಲಿಯೂ ನಿಸ್ಸೀಮರಾಗಿ ತಮ್ಮ ಬುದ್ಧಿ ಪ್ರಭಾವದಿಂದ ಎಲ್ಲರನ್ನೂ ಬೆರಗು ಮಾಡುತ್ತಿರುವರು; ಇದೂ ಅಲ್ಲದೆ ಕೆಲವು ಮಹನೀಯರು ಪ್ರತ್ಯಕ್ಷವಾಗಿ ದುರ್ವೃತ್ತಿಯಲ್ಲಿ ಸೇರದಿದ್ದರೂ ಪರೋಕ್ಷದಲ್ಲಿಯಾದರೂ ಕಳ್ಳರಿಗೆ ಸಹಾಯರಾಗಿದ್ದುಕೊಂಡು ಕಳುವುಮಾಲಿನ ಒಂದಂಶಕ್ಕಾದರೂ ಭಾಗಿಗಳಾಗುತ್ತಿರುವರು. ಇಂತಹವರೊಡನೆ ನಾವು ಪ್ರತಿನಿತ್ಯವೂ ಬೆರೆಯುತ್ತಿದ್ದರೂ, ಅವರನ್ನು ಮಟ್ಟಿಗೆ ಪತ್ತೆಮಾಡುವುದು ಆರಿಂದಲೂ ಸಾಧ್ಯವಲ್ಲ. ಏತಕೆಂದರೆ—ಅವರು ಎಲ್ಲರಂತೆಯೇ ಮಾತನಾಡುವರು, ಎಲ್ಲರಂತೆಯೇ ಬಟ್ಟೆಬರೆಗಳನ್ನು ಧರಿಸುವರು. ಹೊಸಬರೆಂದು ಕಂಡುಬರುವ ಜನರಲ್ಲಿ ಅವರ ಹಾವಳಿಯು ವಿಶೇಷವಾಗಿರುವುದು. ಪರಸ್ಥಳದವರಲ್ಲಿ ಹಣಕಾಸುಗಳೇನಾದರೂ ಇರುವುದು ಗೊತ್ತಾಯಿತೆಂದರೆ, ಅದನ್ನು ಸಂಪೂರ್ತಿಯಾಗಿ ಸುಲಿದುಕೊಳ್ಳುವವರೆಗೂ ಅವರು ಸುಮ್ಮನಿರತಕ್ಕವರಲ್ಲ. ರೈಲು ಸ್ಟೇಷನ್, ನದೀತೀರ, ಧರ್ಮ

ಶಾಲೆ, ಮಾರ್ಕೆಟ್ಟು, ನಾಲ್ಕು ಬೀದಿಗಳು ಸೇರುವ ಸ್ಥಳ, ಸಂತೆ, ಕೋರ್ಟು ಕಛೇರಿಗಳು, ಯಾತ್ರಾಸ್ಥಾನಗಳು, ಹಾಗೂ ಆವಾವ ಸ್ಥಳಗಳಲ್ಲಿ ಬಹುಜನರು ಸೇರುವರೋ ಅಂತಹ ಸ್ಥಳಗಳಲ್ಲಿ ಅವರು ಮೊದಲು ಬಂದಿರುವರು. ನೋಡುವುದಕ್ಕೆ ಅವರು ದೊಡ್ಡ ಮನುಷ್ಯರೇ ಸರಿ; ಅದರಲ್ಲಿ ಕಿಂಚಿತ್ತೂ ಸಂಶಯವಿರುವುದಿಲ್ಲ; ನೋಡಿದ ಮಾತ್ರದಿಂದಲೇ ಅವರು ಕಳ್ಳರೆಂದು ಹೇಳುವುದಕ್ಕೂ ಆಗುವುದಿಲ್ಲ. ಅವರು ಹೊಸಬರೊಡನೆ ಬಹುಬೇಗ ಸೇರಿಕೊಳ್ಳುವರು. ಹೊಸಬರಿಗೆ ಎಲ್ಲಾ ಅನುಕೂಲಗಳನ್ನೂ ಕಲ್ಪಿಸಿಕೊಡುವರು. ಸ್ವಲ್ಪ ಕಾಲದಲ್ಲಿಯೇ ಅವರು ಹೊಸಬರ ವಿಶ್ವಾಸಕ್ಕೆ ಪಾತ್ರವಾಗಿ ಅವರ ಅಂತರಂಗದಲ್ಲಿಯೂ ಸೇರಿಬಿಡುವರು. ಆವ ಕಾರಣದಿಂದಲಾದರೂ ಪರರ ದ್ರವ್ಯವನ್ನು ಅಪಹರಿಸ ಬೇಕೆಂಬುದೇ ಅವರ ಮೂಲ ಮಂತ್ರವು. ಇಂತಹ ಮಹಾತ್ಮರ ಕೃಪಾಕಟಾಕ್ಷದಿಂದ ಅನೇಕ ಜನರು ತಮ್ಮ ಸರ್ವಸ್ವವನ್ನೂ ಹಾಳುಮಾಡಿಕೊಂಡು ಬಿಕಾರಿಗಳಾಗಿ ಬೀದಿ ಬೀದಿಗಳಲ್ಲಿ ತಿರುಗುತ್ತಿರುವರು.

ವಿನಯ—ತಮ್ಮ ಅನುಭವವನ್ನು ನೋಡಿದರೆ ತಮಗಿರುವ ಕಾರ್ಯದಕ್ಷತೆಯು ಅಪಾರವಾದುದೆಂದು ತಾನಾಗಿಯೇ ಕಾಣಬರುತ್ತಿರುವುದು. ಮಹಾಶಯ! ನನ್ನ ಕೆಲಸವನ್ನು ತಾವು ಆವ ರೀತಿಯಲ್ಲಿ ಸಾಧಿಸುವಿರೆಂಬುದನ್ನು ಕುರಿತು ದಯವಿಟ್ಟು ಪರ್ಯಾಲೋಚಿಸಿ ತಿಳಿಸೋಣವಾಗಬೇಕು.

ನಾನು—ಪರ್ಯಾಲೋಚಿಸುವುದೇತಕೆ? ಈ ಷಹರಿನ ಹತ್ತು ಹನ್ನೆರಡು ವರುಷದ ಆವ ಹುಡುಗನೇ ಆಗಲಿ ನೀವು ಕೇಳಿದ ಪ್ರಶ್ನೆಗೆ "ಇಷ್ಟು ನಿಮಗೆ ಗೊತ್ತಾಗಲಿಲ್ಲವೇ? ಇದೇನು ಮಹಾವಿಷಯ! ಇದಕ್ಕಾಗಿ ಪರ್ಯಾಲೋಚಿಸಿ ಹೇಳಬೇಕಾದುದೇನಿರುವುದು?" ಎಂದು ಮುಂತಾಗಿ ಮಾತನಾಡುವನು.

ವಿನಯ—ನನಗೆ ಇದರ ಸಂಗತಿ ಆವುದೂ ಗೊತ್ತಾಗುವುದಿಲ್ಲ. ಅನಾಥನ ಮೇಲೆ ಕನಿಕರವಿಟ್ಟು ವಿಶದವಾಗಿ ತಿಳಿಸಬೇಕು.

ನಾನು—ಹಾಗಾದರೆ ಹೇಳುವೆನು; ಕೇಳೋಣವಾಗಲಿ. ತಮ್ಮೊಡನೆ ರೈಲಿನಲ್ಲಿ ಮಾತನಾಡಿದ ದೊಡ್ಡ ಮನುಷ್ಯನು ಮೊತ್ತಮೊದಲು ನಿಮ್ಮ ಭಾವಭಂಗಿಗಳನ್ನೂ, ಬಳಿಕ ಮಾತುಕತೆಗಳನ್ನೂ ನೋಡಿ, ಮೋಸಕ್ಕೆ ನೀವೇ ಸರಿಯಾದ ಪಾತ್ರವೆಂದು ತಿಳಿದು, ಅನಂತರ ತನ್ನ ಕಾರ್ಯನಿರ್ವಾಹಕ್ಕಾಗಿ ನಿಮ್ಮ ಕುಲಗೋತ್ರಗಳನ್ನೂ, ನಿಮ್ಮ ಉದ್ದೇಶವನ್ನೂ, ನೀವು ತಂದಿರತಕ್ಕ ಹಣವೆಷ್ಟೆಂಬುವುದನ್ನೂ, ನೀವು ಇಳಿಯತಕ್ಕ ಸ್ಥಳ ವೆಲ್ಲಿರುವುದೆಂಬುದನ್ನೂ ಯುಕ್ತಿ

ಯಿಂದ ನಿಮ್ಮಿಂದಲೇ ಹೊರಪಡಿಸಿಕೊಂಡಿರುವನು. ಇದೂ ಅಲ್ಲದೆ, ತನ್ನ ಸ್ವಭಾವದ ವಿಷಯದಲ್ಲಿ ನಿಮಗೆ ನಂಬುಗೆಯನ್ನುಂಟುಮಾಡುವುದಕ್ಕಾಗಿಯೇ ಎರಡು ಮೂರು ಸ್ಟೇಷನುಗಳ ಹಿಂದೆಯೇ ರೈಲನ್ನು ಇಳಿದು ಬೇರೆಯ ಸ್ಥಳಕ್ಕೆ ಹೋಗುವ ನಂತೆ ನಟಿಸಿ ತೋರಿಸಿರುವನು. ನಿಮ್ಮ ಕಣ್ಣಿಗೆ ಮಣ್ಣು ತೂರುವುದಕ್ಕಾಗಿಯೇ ಅವನು ಹೀಗೆ ಮಾಡಿದುದು. ನಿಜವಾಗಿಯೂ ಅವನು ಯಾವ ಗ್ರಾಮಕ್ಕೂ ಹೋಗಬೇಕೆಂದು ಇಳಿದವನಲ್ಲ. ಬೇರೆ ಬೇರೆ ಗಾಡಿಗಳಲ್ಲಿ ಕುಳಿತಿದ್ದ ತನ್ನ ಇತರ ಸ್ನೇಹಿತರಿಗೆ ತಮ್ಮ ಸಂಗತಿಯನ್ನು ತಿಳಿಸಿ ತಮ್ಮ ಮೇಲೆ ದೃಷ್ಟಿ ಇಡುವುದಕ್ಕಾಗಿಯೇ ಆತನು ನಿಮ್ಮ ಗಾಡಿಯಿಂದ ಇಳಿದುದು. 'ಆತನು ಮುಂದೆ ಎಲ್ಲಿಗೆ ಹೋದನು? ಏನು ಕೆಲಸ ಮಾಡಿದನು?' ಎಂಬುದನ್ನು ತಿಳಿದುಕೊಳ್ಳುವುದಕ್ಕೆ ನಿಮಗೆ ಕಾರಣವೇನೂ ಇರಲಿಲ್ಲ. ಆತನು ಕೇವಲವಾಗಿ ಸ್ವಾರ್ಥಪರಾಯಣನಾದುದರಿಂದ ಒಂದೊಂದು ಸ್ಟೇಷನಿನಲ್ಲಿಯೂ, ನೀವಿರುವಿರೋ, ಇಲ್ಲವೋ, ಎಂಬುದನ್ನು ತನ್ನ ಸ್ನೇಹಿತರ ಮುಖದಿಂದ ತಿಳಿದುಕೊಳ್ಳುತ್ತಿದ್ದನು. ರಾತ್ರಿ ಹನ್ನೊಂದು ಗಂಟೆಯ ಸಮಯದಲ್ಲಿ ನೀವು ರೈಲಿಳಿದು, ಬಾಡಿಗೆ ಬಂಡಿಯನ್ನು ಹುಡುಕುತ್ತಿರುವಾಗ ಅವನ ಸ್ನೇಹಿತನೊಬ್ಬನು ತಮ್ಮಲ್ಲಿಗೆ ಬಂದು ಪೂರ್ವಪರಿಚಿತನಂತೆ ಮಾತನಾಡಿರುವನು. ಏನಾದರೂ ಆಗಲಿ; ಮುಂದೇನು ನಡೆಯಿತು, ಎಂಬುದನ್ನು ಬೇಗನೆ ತಿಳಿಸಿರಿ. ಸಾವಕಾಶವಾಗುವುದಾದರೆ, ಚೋರರ ಮನೋರಥವು ಈಡೇರುವ ಸಂಭವವುಂಟು.

ವಿನಯ—ನಾನು ಬಂಡಿಯನ್ನು ಹುಡುಕುವ ಸಮಯದಲ್ಲಿ, ನನ್ನನ್ನು ಮಾತನಾಡಿಸಿದ ಮನುಷ್ಯನು ರೈಲಿನಲ್ಲಿ ಮಾತನಾಡಿಸಿದ ಮನುಷ್ಯನಂತೆ ವೇಷವನ್ನೂ ಧರಿಸಿರಲಿಲ್ಲ. ರೈಲಿನಲ್ಲಿ ನೋಡಿದ ಮನುಷ್ಯನ ವೇಷವಾದರೋ, ಜಮೀನ್ದಾರನಿಗೆ ತಕ್ಕ ವೇಷವಾಗಿದ್ದಿತು. ರಾತ್ರಿಯಲ್ಲಿ ಕಂಡ ಮನುಷ್ಯನಾದರೋ, ಸಾಮಾನ್ಯನಂತೆ ಕಾಣಿಸಿಕೊಳ್ಳುತ್ತಿದ್ದನೇ ಹೊರತು ದೊಡ್ಡ ಮನುಷ್ಯನಂತೆ ಕಾಣಿಸಿಕೊಳ್ಳುತ್ತಿರಲಿಲ್ಲ. ಆತನು ನನ್ನನ್ನು ನೋಡಿ ಮಾತನಾಡಿದುದೇನಂದರೆ—"ತಮ್ಮ ಯಜಮಾನರಾದ ಜಮೀನ್ದಾರರು ನಮ್ಮ ಯಜಮಾನರಿಗೆ ಒಂದು ತಂತೀ ವರ್ತಮಾನವನ್ನು ಕಳುಹಿಸಿರುವರು. ಅದು ಈ ರೀತಿಯಾಗಿರುವುದು.- 'ನಮ್ಮ ಸರ್ವಾಧಿಕಾರಿಯಾದ ವಿನಯಚಂದ್ರರೆಂಬುವರು ಆವುದೋ ಒಂದು ಕೆಲಸವನ್ನು ನಿಮಿತ್ತಮಾಡಿ, ಕೈಯ್ಯಲ್ಲಿ ಹತ್ತು ಸಾವಿರ ರೂಪಾಯಿಗಳನ್ನು ತೆಗೆದುಕೊಂಡು ನಿಮ್ಮಲ್ಲಿಗೆ ಬರುವವರಾಗಿರುವರು. ನಮ್ಮದೊಂದು ತೊಡಕಾದ ಮೊಕದ್ದಮೆಯುಂಟು. ಅದನ್ನು ಒಬ್ಬ ಸಮರ್ಥನಾದ ವಕೀಲನ ಕೈಗೆ ಕೊಡಿಸಿ ವಿನಯನನ್ನು ಕೂಡಿದಷ್ಟು ಬೇಗನೆ ನಮ್ಮಲ್ಲಿಗೆ ಕಳುಹುವುದು.'

ಈ ರೀತಿಯಾಗಿ ಬರೆದಿದ್ದ ತಂತೀವರ್ತಮಾನವನ್ನು ನೋಡಿದ ಕೂಡಲೇ, ತಮಗೆಲ್ಲಾ ವಿಧದಲ್ಲಿಯೂ ಅನುಕೂಲತೆಯನ್ನು ಕಲ್ಪಿಸಿ ಕೊಡುವುದಕ್ಕಾಗಿ ನಮ್ಮ ಯಜಮಾನರು ನನ್ನನ್ನು ತಮ್ಮಲ್ಲಿಗೆ ಕಳುಹಿರುವರು. ದೈವಯೋಗದಿಂದ ಈಗ ತಮ್ಮ ಸಂದರುಶನವಾಯಿತು. ಹೊಸದಾದ ಸ್ಥಳಗಳಲ್ಲಿ ಪರಸ್ಥಳದವರಿಗೆ ದಿಕ್ಕೇ ತೋರುವುದಿಲ್ಲ. ತಮಗೆ ನಾನು ಈಗ ಸಿಕ್ಕದೇ ಹೋಗಿದ್ದಿದ್ದರೆ ಈ ಅರ್ಧ ರಾತ್ರ ದಲ್ಲಿ ತಮಗೆ ಎಂತಹ ಕಷ್ಟನಷ್ಟಗಳು ಉಂಟಾಗುತ್ತಿದ್ದುವೋ ಅದನ್ನು ಊಹಿಸಿ ದೊಡನೆಯೇ ಮೈಯ್ಯೆಲ್ಲಾ ನಡುಗುವುದು.''

ಆ ಮನುಷ್ಯನು ಹೀಗೆ ಹೇಳಿದ ಮಾತನ್ನು ನಾನು ನಂಬಿದೆನು. ಆತನು ನನಗಾಗಿ ಬಂಡಿಯೊಂದನ್ನು ಬಾಡಿಗೆಗೆ ತೆಗೆದನು. ಅದರಲ್ಲಿ ನಾವಿಬ್ಬರೂ ಕುಳಿ ತೆವು. ಪರಸ್ಥಳದಲ್ಲಿ ಇಷ್ಟು ಆಶ್ರಯವು ಸಿಕ್ಕಿದುದು ನನಗೆ ಬಹಳ ಸಂತೋಷ ವನ್ನುಂಟುಮಾಡಿತು. ನಾನು ಅವರ ಸೌಜನ್ಯವನ್ನು ಕುರಿತು ಮನದಲ್ಲಿಯೇ ಕೊಂಡಾಡುತ್ತಾ ತೆರಳಿದೆನು.

---

## ಆರನೆಯ ವಿಲಾಸ

ನಾನು ವಿನಯ ಚಂದ್ರನ ಮಾತನ್ನು ಕೇಳಿ ವಿಸ್ಮಿತನಾಗಿ - ಹಾಗೂ ಆಗು ವುದುಂಟು. ಅದರಲ್ಲಿ ಆಶ್ಚರ್ಯವೇನಿರುವುದು ? ಆಮೇಲೆ ನಡೆದುದಾದರೂ ಏನು ? ಎಂದು ಕೇಳಿದೆನು.

ವಿನಯ—ಪ್ರಾಯಕವಾಗಿ ಅರ್ಧ ಘಂಟೆಯ ವರಿಗೂ ನಾವು ಗಾಡಿಯಲ್ಲಿ ಕುಳಿತು ಹೊರಟೆವು. ಗಾಡಿಯು ಗಡಗಡನೆ ಶಬ್ದ ಮಾಡುತ್ತಾ ಹೊರಟೇ ಹೋ ಯಿತು. ಈ ಮಧ್ಯದಲ್ಲಿ ಎಷ್ಟೋ ರಸ್ತೆಗಳೂ, ಎಷ್ಟೋ ಗಲ್ಲಿಗಳೂ, ಕಣ್ಮರೆಯಾಗಿ ಹೋದುವು. ದಾರಿಯ ಉದ್ದಕ್ಕೂ, ಆತನು ನನ್ನೊಡನೆ ಆ ಮಾತು ಈ ಮಾತು ಆಡುತ್ತಾ ಕಾಲವನ್ನು ಕಳೆಯಿಸುತ್ತಿದ್ದನು. ಈ ಮಾತಿನ ಸಂದರ್ಭದಲ್ಲಿ ಗಾಡಿಯು ಆವ ಕಡೆಗೆ ತೆರಳಿತೆಂಬುದೇ ನನಗೆ ಗೊತ್ತಾಗಲಿಲ್ಲ. ನನ್ನ ಜತೆ ಯಲ್ಲಿದ್ದವನು ಗಾಡಿಯವನನ್ನು ಕುರಿತು—ಎಡಕ್ಕೆ ಹೊಡಿ, ಬಲಕ್ಕೆ ಹೊಡಿ, ಎಂದು ಆಗಿಂದಾಗ ಹೇಳುತ್ತಿದ್ದನು. ದುಡ್ಡಿನಾಸೆಗೆ ಗಾಡಿಯವನು ಅವನಪ್ಪಣೆ ಯಂತೆಯೇ ನಡೆದುಕೊಳ್ಳುತ್ತಿದ್ದನು. ಕೊನೆಗೆ ಆವುದೋ ಒಂದು ಗಲ್ಲಿಗೆ ನಾವು ಬಂದ ಕೂಡಲೇ ನನ್ನ ಜತೆಗಾರನು-ಗಾಡಿಯನ್ನು ನಿಲ್ಲಿಸು ಎಂದು ಕೂಗಿ ಹೇಳಿದನು. ಗಾಡಿಯು ತಟ್ಟನೆ ನಿಂತಿತು. ಆ ಕೂಡಲೇ ನನ್ನ ಜತೆಗಾರನು ಕೈಯ್ಯನ್ನು ಹಿಡಿದುಕೊಂಡು ನನ್ನನ್ನು ಗಾಡಿಯಿಂದ ಇಳಿಸಿದನು. ನಾನು ಇಳಿದ

ಕೂಡಲೇ ನನ್ನ ಗಂಟನ್ನು ಕೈಯ್ಯಲ್ಲಿ ತೆಗೆದುಕೊಂಡೆನು. "ತಾವು ರೈಲಿನಲ್ಲಿ ವಿಶೇಷವಾಗಿ ಶ್ರಮಪಟ್ಟು ಬಂದಿರೋಣವಾಗಿದೆ. ತಮಗೆ ಆಯಾಸವೇತಕೆ? ತಮ್ಮ ಗಂಟನ್ನು ನಾನು ಹೊತ್ತುಕ್ಕೊಂಡು ಬರುವೆನು. ತಮಗೆ ಕೊಂಚವೂ ಶ್ರಮವಾಗದಂತೆ ಕರೆದುಕೊಂಡು ಬರಬೇಕೆಂದು ನಮ್ಮ ಯಜಮಾನರ ಅಪ್ಪಣೆ ಯಾಗಿದೆ. ತಾವು ಆವುದಕ್ಕೂ ಸಂಕೋಚಪಡ ಕೆಲಸವಿಲ್ಲ" ಎಂದು ಆತನು ಹೇಳಿದ ಮಾತನ್ನು ನಾನು ಕೇಳಿ ಬಹಳ ಸಂತೋಷಪಟ್ಟು - ಗಂಟು ಅಷ್ಟೇನೂ ಭಾರವಿಲ್ಲದಿರುವುದರಿಂದ ನಾನೇ ಅದನ್ನು ತೆಗೆದುಕೊಂಡು ಬರುವೆನು; ತಮ್ಮ ಉಪಕಾರಕ್ಕಾಗಿ ನಾನು ಬಹಳ ಬಾಧ್ಯಪಟ್ಟಿರುವೆನು, ಎಂದು ಹೇಳಿದೆನು. "ತಮಗೆ ಕಷ್ಟವಾಗದಿದ್ದರೆ ಸರಿ" ಎಂದು ಆತನು ಹೇಳಿ ಬಂಡಿಯವನಿಗೆ ಬಾಡಿಗೆಯನ್ನು ಸಲ್ಲಿಸಿ ಅವನನ್ನು ಕಳುಹಿದನು. ನಾವಿಬ್ಬರೂ ಗಲ್ಲಿಯಲ್ಲಿ ಹೊರಟೆವು.

ನಾನು—ಗಲ್ಲಿಯಲ್ಲಿ ಹೊರಟ ಕೂಡಲೇ ತಾವು ಮೊದಲು ಏನನ್ನು ನೋಡಿದಿರಿ ?

ವಿನಯ—ಎಲ್ಲರೂ ಅದ್ಭುತವೆಂದು ಹೇಳಿಕೊಳ್ಳುತ್ತಿದ್ದ ಈ ನಗರವು ಅದಾಗಿರಲಿಲ್ಲ. ಅಲ್ಲಿ ಜನರ ಸುಳಿವೇ ಇರಲಿಲ್ಲ. ಮೊದಲು ಮೊದಲು ಒಂದೆ ರಡು ಹೆಂಚಿನ ಮನೆಗಳು ಕಾಣಿಸಿಕೊಳ್ಳುತ್ತಿದ್ದುವು. ಕೊನೆಗೆ ಕೊನೆಗೆ ತೋಟ, ಹೊಲ, ಗದ್ದೆ, ಅದಾದಮೇಲೆ ಅಂಧಕಾರ, ಭಯಂಕರವಾದ ಅಂಧಕಾರ.

ನಾನು—ಒಂದೇ ತಡವೆಗೆ ಅಂಧಕಾರವು ಬಂದು ಬಿಟ್ಟಿತೇ ? ಅದೆಂತಹ ಮಾತು ! ಆಮೇಲೆ ?

ವಿನಯ—ಘೋರವಾದ ಅಂಧಕಾರದಲ್ಲಿ ನಾನು ಕಾಲುದಾರಿ ಹಿಡಿದು ಆ ಮನುಷ್ಯನನ್ನು ಅನುಸರಿಸಿಕೊಂಡು ಹೋಗುತ್ತಿದ್ದೆನು. ನನ್ನ ಹಿಂದೆ ಹಿಂದೆಯೇ ಆರೋ ಬರುತ್ತಿದ್ದಂತೆ ಕೇಳಿಸಿತು. ಅದಾರಿರಬಹುದೆಂದು ನಾನು ಹಿಂದಿರುಗಿ ನೋಡುವಷ್ಟರೊಳಗಾಗಿಯೇ. ಅಯ್ಯೋ! ನನ್ನ ತಲೆಯ ಮೇಲೆ ಬಲವಾದ ದೊಣ್ಣೆಯ ಪೆಟ್ಟು ಬಿದ್ದಿದ್ದಿತು. ಕುಯ್ಯೋ! ಮೊರೆಯೋ! ಎಂದು ನಾನು ಅರಚಿದಾಗ ನನ್ನ ಕೈಯ್ಯಲ್ಲಿದ್ದ ಗಂಟು ಮಾಯವಾಗಿ ಬಿಟ್ಟಿದ್ದಿತು. ನಾನು ಪೆಟ್ಟಿನ ಯಾತನೆಯನ್ನು ತಡೆಯಲಾರದೆ, ಭೂಮಿಯ ಮೇಲೆ ಸುರುಟಿ ಕ್ಕೊಂಡು ಬಿದ್ದೆನು. ಆ ಕೂಡಲೇ ನನಿಗೆ ಜ್ಞಾನವು ತಪ್ಪಿತು. ಮುಂದೇನು ನಡೆಯಿತೆಂಬುದು ನನ್ನ ಸ್ಮರಣೆಗೆ ಬರಲಿಲ್ಲ.

---

## ಏಳನೆಯ ವಿಲಾಸ

ವಿನಯನು ಹೇಳಿದ ಮಾತನ್ನು ಕೇಳಿ ನನಗೆ ಅವನಲ್ಲಿ ಬಲು ದಯೆ ಯುಂಟಾಯಿತು. ಈ ಮೋಸಗಾರರಿಬ್ಬರನ್ನೂ ಹೇಗಾದರೂ ಮಾಡಿ ಹಿಡಿದು ಶಿಕ್ಷಿಸಬೇಕೆಂದು ನಾನು ಪ್ರತಿಜ್ಞೆಮಾಡಿಕೊಂಡು—ಈಗ ತಾವೇನು ಮಾಡುವಿರಿ ? ಎಂದು ಆತನನ್ನು ಕೇಳಿದೆನು.

ವಿನಯನು ಗಳಗಳನೆ ಅಳುತ್ತಾ ಇಂತೆಂದನು :—" ನನಗೇನೂ ತೋರು ವುದಿಲ್ಲ. ನನ್ನ ಸರ್ವಸ್ವವೆಲ್ಲವೂ ನಾಶವಾಗಿ ಹೋಯಿತು. ತಾವು ಹೇಗೆ ಅಪ್ಪಣೆ ಮಾಡೋಣವಾಗುವುದೋ, ನಾನು ಹಾಗೆಯೇ ನಡೆದುಕೊಳ್ಳುವೆನು. ಈ ಸಲ ಈ ದುರಂತವಾದ ಕಷ್ಟದಿಂದ ಪಾರಾಗುವುದಾದರೆ, ನಾನು ಆವಾಗಲೂ ತಮಗೆ ಕೃತಜ್ಞನಾಗಿರುವೆನಲ್ಲದೆ, ಮುಂದೆ ಬಹಳ ಎಚ್ಚರಿಕೆಯಿಂದಲೂ ಇರು ವೆನು."

ನಾನು ವಿನಯನ ಅವಸ್ಥೆಯನ್ನು ನೋಡಿ ಆತನನ್ನು ಸಂತೈಸುತ್ತಾ ಹೇಳ ತೊಡಗಿದೆನು :—ತಾವು ಅಪೇಕ್ಷೆಪಡುವ ವಕೀಲನ ಹತ್ತಿರಕ್ಕೆ ತಮ್ಮನ್ನು ಕರೆದುಕೊಂಡು ಹೋಗಿ ಬಿಡುವೆನು. ನೀವು ಆತನಿಗೆ ನಡೆದ ಸಂಗತಿಗಳೆಲ್ಲವನ್ನೂ ತಿಳಿಸಿದರೆ, ಆತನು ನಿಮ್ಮ ವಿಷಯದಲ್ಲಿ ಮರುಕಗೊಂಡವನಾಗಿ, ನಿಮ್ಮ ಯಜ ಮಾನರ ಕೆಲಸವೆಲ್ಲವನ್ನೂ, ಒಂದು ಕಾಸೂ ತೆಗೆದುಕೊಳ್ಳದೆಯೇ ನೆರವೇರಿಸಿ ಕೊಡುವನು.

ಈ ರೀತಿಯಾಗಿ ಮಾತುಕತೆಗಳನ್ನಾಡಿಕೊಂಡಮೇಲೆ, ನಾವಿಬ್ಬರೂ ಒಬ್ಬ ಯೋಗ್ಯನೆನಿಸಿದ ವಕೀಲನ ಮನೆಗೆ ತೆರಳಿದೆವು. ವಕೀಲನು ರಾಮಪುರದ ಜಮಿನ್ದಾರರಾದ ಶ್ರೀಯುತ ರಾಜರಾಜೇಶ್ವರ ಚಕ್ರವರ್ತಿಯವರ ಹೆಸರನ್ನು ಕೇಳಿದ ಕೂಡಲೇ, ಆತನ ಕಾರ್ಯವೇನಿದ್ದರೂ ಹಣಕಾಸು ತೆಗೆದುಕೊಳ್ಳ ದೆಯೇ ನೆರವೇರಿಸಿ ಕೊಡುವುದಾಗಿ ಮಾತಕೊಟ್ಟನು.

"ಶಶಾಂಕಶೇಖರ ಮಹಾಶಯ! ತಮ್ಮ ಅನುಗ್ರಹ ಬಲದಿಂದ ನಾನು ಬಂದ ಕೆಲಸವು ನೆರವೇರಿತು. ಇನ್ನು ನಾನು ಇಲ್ಲಿ ಏತಕ್ಕೆ ಕಷ್ಟಪಟ್ಟುಕೊಂಡಿರ ಬೇಕು ? ನೀವು ಇಷ್ಟಪಡುವುದಾದರೆ ಈ ದಿನವೇ ನಾನು ನಮ್ಮೂರಿಗೆ ಹೋಗಿ ಸೇರಿಕೊಳ್ಳುವೆನು," ಎಂದು ವಿನಯನು ನುಡಿದನು.

ನಾನು—ಕೂಡದು ; ನಾನು ಕೈಗೊಂಡ ಕೆಲಸದಲ್ಲಿ ತಮ್ಮ ಸಲಹೆಗಳು ಆಗಿಂದಾಗ ಬೇಕಾಗುತ್ತಿರುವುವು. ಆದುದರಿಂದ ನಾನು ಅಪೇಕ್ಷೆಪಡುವಷ್ಟು

ದಿನಗಳ ಮಟ್ಟಿಗಾದರೂ ಇಲ್ಲಿದ್ದು ಬಳಿಕ ತೆರಳಬಹುದು. ಈ ಮಧ್ಯದಲ್ಲಿ ತಮಗೆ ಇಲ್ಲಿ ವಾಸಕ್ಕೂ, ಭೋಜನೋಪಚಾರಗಳಿಗೂ, ತೊಂದರೆ ಯಾಗುವ ಪಕ್ಷದಲ್ಲಿ ನಮ್ಮ ಮನೆಯೇ ಇರುವುದು; ನೀವು ಆವ ವಿಧದಲ್ಲಿಯೂ, ಸಂಕೋಚಪಡ ಬೇಕಾದ ಆವಶ್ಯವಿರುವುದಿಲ್ಲ.

ವಿನಯ—ಈ ನಗರಕ್ಕೆ ಸೇರಿದ ಹಾಗೆ ನಂದಿ ಗ್ರಾಮವೆಂಬುದೊಂದು ಹಳ್ಳಿಯಿರುವುದಂತೆ. ಅಲ್ಲಿ ನಮ್ಮ ಬಂಧುವೊಬ್ಬನು ವಾಸವಾಗಿರುವನೆಂದು ಕೇಳಿರುವೆನು. ನಾನು ಅಲ್ಲಿಗೆ ಹೋಗಿ ಆತನಲ್ಲಿದ್ದುಕೊಂಡಿರುವೆನು. ಈ ನಗರ ದಲ್ಲಿ ವಾಸಮಾಡುವುದಕ್ಕೆ ನನ್ನ ಮನಸ್ಸು ಅದೇತಕೋ ಹಿಂಜರಿಯುವುದು. ತಾವು ಹೇಳಿಕಳುಹಿಸಿದಾಗ ನಾನು ಬರಲು ಸಿದ್ಧನಾಗಿರುವೆನು. ಇದು ತಮಗೆ ಸಮ್ಮತವಷ್ಟೇ?

ಬಲು ಹೊತ್ತು ನಾನು ಆಲೋಚಿಸಿ, ಒಪ್ಪಿಕೊಂಡೆನು. ನನ್ನ ಜೇಪಿ ನಿಂದ ಒಂದು ಸಣ್ಣ ಪುಸ್ತಕವನ್ನು ತೆಗೆದು ಅದರಲ್ಲಿ ವಿನಯಚಂದ್ರನ ನಾಮ ಧಾಮಗಳನ್ನು ಸ್ಪಷ್ಟವಾಗಿ ಬರೆದು ಕೊಂಡೆನು. ಆಮೇಲೆ ವಿನಯಚಂದ್ರನು ಅಪ್ಪಣೆಯನ್ನು ತೆಗೆದುಕೊಂಡು ಹೊರಟುಹೋದನು. ಅನಂತರ ನಾನು ವಕೀಲ ನೊಡನೆ ಬಹಳ ಹೊತ್ತು ಮಾತನಾಡುತ್ತಿದ್ದು, ಜಮೀನ್ದಾರನಿಗೆ ಒಂದು ತಂತೀ ವರ್ತಮಾನವನ್ನು ಕಳುಹುವಂತೆ ಹೇಳಿದೆನು. ಅದರ ಸಾರಾಂಶವೇನೆಂದರೆ—

"ತಮ್ಮ ಕಡೆಯ ಸರ್ವಾಧಿಕಾರಿಯಾದ ವಿನಯಚಂದ್ರನು ನೆನ್ನೆಯ ರಾತ್ರಿ ಹನ್ನೊಂದು ಗಂಟೆಯ ಸಮಯದಲ್ಲಿ ಇಲ್ಲಿಗೆ ಬಂದು ಸೇರಿದನು. ದಾರಿ ಯಲ್ಲಿ ಕಳ್ಳರು ಬಿದ್ದು, ಆತನ ಸರ್ವಸ್ವವನ್ನೂ ಅಪಹರಿಸಿರುವರು. ಈ ವರ್ತ ಮಾನವು ತಲಪಿದ ಕೂಡಲೇ ತಾವು ಅತನೊಡನೆ ಕಳುಹಿದ್ದ ನೋಟುಗಳ ನಂಬರು ಗಳನ್ನು ನಮಗೆ ತಿಳಿಸೋಣವಾಗಬೇಕು. ಆಗಿಂದಾಗ ತಮಗೆ ಇಲ್ಲಿನ ಸಂಗತಿ ಗಳನ್ನು ಕುರಿತು ಕಾಗದ ಬರೆಯುತ್ತಿರುವೆವು. ಮೊಕದ್ದಮೆಯ ವಿಷಯವಾಗಿ ತಾವು ಚಿಂತಿಸತಕ್ಕ ಕೆಲಸವಿಲ್ಲ. ಇಷ್ಟರಲ್ಲಿಯೇ ಇಬ್ಬರು ಬ್ಯಾರಿಸ್ಟರುಗಳು ತಮ್ಮ ದರುಶನಕ್ಕಾಗಿ ಬರುವವರಾಗಿರುವರು."

ಈ ರೀತಿಯಾಗಿ ತಂತೀ ವರ್ತಮಾನವನ್ನು ಕಳುಹಿ, ಎಲ್ಲಾ ಸಂಗತಿಗಳಿಗೂ ವಿಶದವಾಗಿ ಮತ್ತೊಂದು ಕಾಗದವು ಬರೆಯಲ್ಪಟ್ಟಿತು. ನಾವಿಬ್ಬರೂ ಮಾತ ನಾಡುತ್ತ ಕುಳಿತಿರುವಾಗಲೇ, ನಮ್ಮ ತಂತಿಯ ವರ್ತಮಾನಕ್ಕೆ ಪ್ರತ್ಯುತ್ತರವು ಬಂದು ಬಿಟ್ಟಿತು. ಅದರ ಸಾರಾಂಶ ವೀರೀತಿಯಾಗಿದ್ದಿತು:—

"ನಡೆದ ಸಂಗತಿಯನ್ನು ಕೇಳಿ ಬಹಳ ವ್ಯಸನವಾಯಿತು. ಹಣಕ್ಕಾಗಿ ತಾವು ಚಿಂತಿಸಬೇಕಾದುದೇನೂ ಇರುವುದಿಲ್ಲ; ಆದರೆ, ಬಹು ಸಮರ್ಥರಾದ ಇಬ್ಬರು ಬ್ಯಾರಿಸ್ಟರನ್ನು ಮಟ್ಟಿಗೆ ದಯವಿಟ್ಟು ನಮ್ಮಲ್ಲಿಗೆ ಕಳಿಸಿ ಕೊಡಬೇಕು. ವಿನಯಚಂದ್ರನನ್ನು ಈ ದಿನವೇ ಇಲ್ಲಿಗೆ ಕಳುಹಿಸಿ ಕೊಟ್ಟಿದ್ದರೆ ಚೆನ್ನಾಗಿರುತ್ತಿದ್ದಿತು. ದರೋಡೆ ಗಳ್ಳರನ್ನು ಕಂಡುಹಿಡಿದು ಶಿಕ್ಷಿಸುವುದಕ್ಕೆ ತಕ್ಕ ಏರ್ಪಾಡು ಮಾಡೋಣವಾಗಲಿ. ವೆಚ್ಚಕ್ಕೆ ಏನು ಬೇಕಾಗುವುದೋ ತಿಳಿಸಿದರೆ ನಾನು ಅದನ್ನು ಕಳುಹಿಸಿ ಕೊಡುವೆನು. ಮತ್ತೊಂದು ತಂತಿಯ ಮೂಲಕ ನೋಟುಗಳು ನಂಬರನ್ನು ಕಳುಹಿರುವೆನು. ಉಳಿದ ಸಂಗತಿಗಳಿಗೆ ಬೇರೆಯಾಗಿ ಪತ್ರವನ್ನು ಬರೆಯುವೆನು."

ಯಥಾ ಸಮಯದಲ್ಲಿ ನೋಟುಗಳ ನಂಬರುಗಳು ಬಂದು ತಲಪಿದುವು. ನಾನು ಅವುಗಳನ್ನು ನನ್ನ ಕೈಬುಕ್ಕಿನಲ್ಲಿ ಗುರುತುಮಾಡಿಕೊಂಡು ಕರ್ರೆಸಿ ಆಫೀಸಿಗೆ ಹೊರಟೆನು. ನನ್ನಲ್ಲಿದ್ದ ನಂಬರುಗಳನ್ನು ಆ ಆಫೀಸಿನಲ್ಲಿ ಬರೆಯಿಸಿ ಆ ನಂಬರುಗಳ ನೋಟು ಬಂದರೆ ಅವುಗಳಿಗೆ ಹಣ ಕೊಡದೆ, ನೋಟುತಂದವರನ್ನು ನಿರ್ಬಂಧದಲ್ಲಿಡಬೇಕೆಂದು ಹೇಳಿ, ನಾನು ಮುಂದಣ ಕೆಲಸವನ್ನು ನೋಡುವುದಕ್ಕಾಗಿ ತೆರಳಿದೆನು.

---

## ಎಂಟನೆಯ ವಿಲಾಸ

ಮರುದಿನ ವಿನಯನನ್ನು ಕರೆಕಳುಹಿಸಿ ಆತನು ಹಿಂದಿನ ದಿನ ಆವ ಸ್ಥಳದಲ್ಲಿ ಮೂರ್ಛಿತನಾಗಿ ಬಿದ್ದಿದ್ದನೋ, ಆ ಸ್ಥಳಕ್ಕೆ ಆತನೂ ನಾನೂ, ನಾಲ್ಕಾರು ಜನರು ಪೋಲೀಸಿನವರೂ ಎಲ್ಲರೂ ಸೇರಿಕೊಂಡು ಹೊರಟೆವು. ವಿಚಾರಮಾಡಿದುದರಲ್ಲಿ, ಆ ಸ್ಥಳದ ಹೆಸರು "ಭೂತನ ಕಟ್ಟೆ" ಎಂದು ಗೊತ್ತಾಯಿತು. ನಾವು ಅಲ್ಲಿ ಬಿದ್ದು ಇಲ್ಲಿ ಬಿದ್ದು, ಕಟ್ಟಕಡೆಗೆ ಆ ಸ್ಥಳಕ್ಕೆ ಬಂದು ಸೇರಿದೆವು. ಸರಿಯಾದ ರಸ್ತೆಯಲ್ಲಿ ನಾವು ಅಲ್ಲಿಗೆ ಹೊರಟಿದ್ದರೆ, ಹತ್ತು ನಿಮಿಷಗಳೊಳಗಾಗಿಯೇ ಭೂತನ ಕಟ್ಟೆಗೆ ಹೋಗಬಹುದಾಗಿದ್ದಿತು; ಆದರೆ, ವಿನಯನಿಗೆ ದಿಕ್ಕು ತೋರದಿರುವುದಕ್ಕಾಗಿ ಕಳ್ಳರು ಇಷ್ಟು ಸುತ್ತಾದ ಮಾರ್ಗದಲ್ಲಿ ಕರೆದುಕೊಂಡು ಹೋಗಿರಬೇಕೆಂದು ಊಹಿಸಿಕೊಂಡೆನು.

ಆವ ಸ್ಥಳದಲ್ಲಿ ವಿನಯನು ಪೆಟ್ಟುತಿಂದು "ಅಯ್ಯೋ! ಅಮ್ಮಾ! ಕುಯ್ಯೋ! ಮೊರೆಯೋ! ಎಂದು ಅರಚಿಕೊಂಡು ಮೂರ್ಛಿತನಾದನೋ, ಅಲ್ಲಿಗೆ ನಾವು ಹೋಗುವುದಕ್ಕೆ ಬಹಳ ಹೊತ್ತು ಹಿಡಿಯಲಿಲ್ಲ. ನನ್ನ ಜತೆಯಲ್ಲಿ

ಬಂದಿದ್ದ ಪೋಲೀಸಿನವರಲ್ಲಿಬ್ಬರು ಭೂತನ ಕಟ್ಟೆಯಲ್ಲಿ ಪಹರೆ ಕೊಡತಕ್ಕವರಾಗಿದ್ದರು. ಅಯ್ಯೋ ಪಾಪ! ಅವರಿಗೆ ಆ ಸಂಗತಿ ಯಾವುದೂ ಗೊತ್ತೇ ಇಲ್ಲ. ನಾನು ಕೃತ್ಯ ನಡೆದ ಸ್ಥಳದಲ್ಲಿ ನಿಂತುಕೊಂಡು ವಿನಯನನ್ನು ಕುರಿತು— ಮಹಾಶಯ! ಇಲ್ಲಿಯಲ್ಲನೇ ತಮಗೆ ಪೂಜೆಯಾದುದು? ಸರಿಯಾಗಿ ನೋಡಿ ಹೇಳೋಣವಾಗಲಿ, ಎಂದು ಕೇಳಿದೆನು.

ವಿನಯನು ಕೊಂಚವೂ ತಡಮಾಡದೆ, "ಅಹುದು, ಅಹುದು, ಇಲ್ಲಿಯೇ ನನಗೆ ಆಗುವುದೆಲ್ಲಾ ಆದುದು" ಎಂದುಸಿರಿದನು.

ನಾನು—ಇದೇ ಸ್ಥಳವೆಂದು ನಿಮಗೆ ಹೇಗೆ ಗೊತ್ತು ?

ವಿನಯ—ಈ ಎರಡು ಗಿಡಗಳು ರಾತ್ರಿಯಲ್ಲಿ ಪಿಶಾಚಗಳ ಹಾಗೆ ನಿಂತಿದ್ದುದು ಈಗಲೂ ಜ್ಞಾಪಕದಲ್ಲಿದೆ. ಅದರ ಆಧಾರದ ಮೇಲೆಯೇ ನಾನು ಹೇಳುವುದು.

ಬಳಿಕ, ನಾನು ಭೂತನ ಕಟ್ಟೆಯ ಪಹರೆಯವರನ್ನು ಕುರಿತು ಕೇಳಿದುದಕ್ಕೆ ಅವರು ಹೇಳಿದುದು:—ಇದೇ ಸ್ಥಳವೇ; ಇಲ್ಲಿಯೇ ಈ ಮಹಾಶಯರು ಜ್ಞಾನವಿಲ್ಲದೇ ಬಿದ್ದಿದ್ದರು. ನಾವು ಬಂದು ನೋಡಿದಾಗ, ಇವರ ಪಕ್ಕದಲ್ಲಿ ಮತ್ತೊಬ್ಬ ಮನುಷ್ಯನು ನಿಂತಿದ್ದನು. ಆತನು ಈ ಪಕ್ಕದಲ್ಲಿರುವ ತೋಟದ ಮಾಲಿಕನು. ಈ ಮಹಾಶಯರು ಮಾಡಿದ ಚೀತ್ಕಾರ ಧ್ವನಿಯನ್ನು ಕೇಳಿದ ಕೂಡಲೇ ಆ ಮಾಲಿಕನು ಇಲ್ಲಿಗೆ ಓಡಿಬಂದು "ಕಳ್ಳ, ಕಳ್ಳ, ಖೂನಿ, ಖೂನಿ" ಎಂದು ಗಟ್ಟಿಯಾಗಿ ಅರಚಿಕೊಂಡುದರ ಮೇಲೆ, ಬೇರೆಯ ಸ್ಥಳದಲ್ಲಿ ಪಹರೆಕೊಡುತ್ತಿದ್ದ ನಮಗೆ ಕೇಳಿಸಲು, ನಾವು ದಡಬಡನೆ ಓಡಿಬಂದೆವು. ಬಂದ ಕೂಡಲೇ ನಾವು ಸೀಟಿಯನ್ನೂದಲು, ಇನ್ನಿಬ್ಬರು ಪೋಲೀಸಿನವರು ಬಂದರು. ಆ ಮೇಲೆ ಮತ್ತಿಬ್ಬರೂ ಬಂದರು. ಸ್ವಲ್ಪ ಹೊತ್ತಿನೊಳಗಾಗಿಯೇ, ಹತ್ತಾರು ಜನರು ಘೇರಾಯಿಸಿಕ್ಕೊಂಡರು. ನಾವು ಕಾಲಹರಣ ಮಾಡದೆ, ಸಮೀಪದಲ್ಲಿಯೇ ವಾಸವಾಗಿರುತ್ತಿದ್ದ ಒಬ್ಬ ವೈದ್ಯನನ್ನು ಕರೆದುಕೊಂಡು ಬಂದು ಪರೀಕ್ಷೆ ಮಾಡಿಸಿದೆವು. ಆತನು ನಾಡಿ ಹಿಡಿದು ನೋಡಿದನು; ಎದೆಯಮೇಲೆ ಕಿವಿ ಯಿಟ್ಟು ನೋಡಿದನು; ತಲೆಯನ್ನು ಹಿಡಿದು ನೋಡಿದನು. ಬಹುಮಾತಿನಿಂದೇನು? ಅವನ ಸಂಶಯವು ಪರಿಹಾರವಾಗುವುದಕ್ಕೆ ಏನೇನು ಮಾಡಬೇಕೋ ಅದೆಲ್ಲವನ್ನೂ ಮಾಡಿಕೊಂಡನು. ಆತನು ಒಂದು ಕ್ಷಣಕಾಲ ಪರೀಕ್ಷಿಸಿ, ನೋಡಿಕೊಂಡು "ಈತನು ಇನ್ನೂ ಜೀವದಿಂದಿರುವನು; ಪ್ರಾಣಭಯವೇನೂ ಕಂಡು ಬರುವುದಿಲ್ಲ. ಎದೆ, ತಲೆ, ಇವುಗಳ ಮೇಲೆ ನೀರು ತಟ್ಟಿ, ಗಾಳಿ ಹಾಕಿದರೆ, ಈತನಿಗೆ ಎಚ್ಚರವಾಗುವುದು.

ಈತನ ದೇಹದಲ್ಲಿ ಪೆಟ್ಟಿನ ಗಾಯವಾವುದೂ ಕಂಡು ಬರುವುದಿಲ್ಲ. ಈತನು ವಿಶೇಷವಾಗಿ ಭಯಪಟ್ಟುದರ ಮೇಲೆ ಮೂರ್ಛೆಯುಂಟಾದಂತೆ ತಿಳಿದು ಬರುವುದು. ಈತನನ್ನು ಈಗಲೇ ದೊಡ್ಡ ಆಸ್ಪತ್ರೆಗೆ ಕರೆದುಕೊಂಡು ಹೋಗುವುದು ಯುಕ್ತ ವಾಗಿದೆ." ಎಂದು ಹೇಳಿ ಹೊರಟು ಹೋದನು.

ನಾವು ಈ ಮಹಾಶಯರನ್ನು ಒಂದು ಗಾಡಿಯಲ್ಲಿ ಹಾಕಿಕೊಂಡು ವೈದ್ಯನ ಪರಾಮರ್ಶದಂತೆಯೇ, ಆಸ್ಪತ್ರೆಗೆ ಕರೆದುಕೊಂಡು ಹೋದೆವು. ಅಲ್ಲಿ ಸುಮಾರು ಎರಡು ಗಂಟೆಯ ಸಮಯದಲ್ಲಿ ಈತನಿಗೆ ಜ್ಞಾನೋದಯವಾಯಿತು. ರಾತ್ರಿಯೆಲ್ಲಾ ಅಲ್ಲಿಯೇ ಕಾದು ಬಿದ್ದಿದ್ದು, ಬೆಳಗಾದ ಕೂಡಲೆ ಈತನನ್ನು ನಮ್ಮ ಇಲಾಖೆಯ ಅಧಿಕಾರಿಗಳಿದ್ದಲ್ಲಿಗೆ ಕರೆದುಕೊಂಡು ಹೋದೆವು. ಅಲ್ಲಿ ಶಾಸ್ತ್ರೋಕ್ತವಾಗಿ ನಡೆಯಬೇಕಾದ ಕೆಲಸಗಳನ್ನು ನಡೆಯಿಸುವುದಕ್ಕೋಸ್ಕರ ಹಿಂದೆ ಹೇಳಿದ ತೋಟದ ಮಾಲಿಕನನ್ನು ಹಿಡಿತರಿಸಿ "ರಾತ್ರಿ ನಡೆದ ವಿಷಯದಲ್ಲಿ ನಿನಗೆಷ್ಟು ಗೊತ್ತು ? ಹೇಳು ;" ಎಂದು ಕೇಳಿದೆವು. ಅದಕ್ಕೆ ಮಾಲಿಕನು— "ಸ್ವಾಮಿ, ರಾತ್ರಿಯಲ್ಲಿ ಹನ್ನೊಂದೋ, ಹನ್ನೆರಡೋ ಗಂಟೆಯಾಗಿರಬಹುದು. ಆಗ ನನ್ನ ತೋಟದ ಪಕ್ಕದಲ್ಲಿಯೇ, ಅಯ್ಯೋ! ಅಮ್ಮಾ! ಕುಯ್ಯೋ! ಮೊರೆಯೋ! ಎಂದು ಭಯಂಕರವಾದ ಧ್ವನಿಯೊಂದು ಕೇಳಬಂದಿತು. ನಾನು ಆ ಕ್ಷಣವೇ ಒಂದು ಹರಿತವಾದ ಕಠಾರಿಯನ್ನು ಕೈಯಲ್ಲಿ ತೆಗೆದುಕೊಂಡು, ಶಬ್ದ ಕೇಳಿಬಂದ ಸ್ಥಳಕ್ಕೆ ಓಡಿದೆನು. ಅಲ್ಲಿಗೆ ಬಂದು ನೋಡಲಾಗಿ ಈ ದೊಡ್ಡ ಮನುಷ್ಯರು ಜ್ಞಾನತಪ್ಪಿ ಬಿದ್ದಿದ್ದರು." ಎಂದು ಹೇಳಿದನು.

ಈ ರೀತಿಯಲ್ಲಿ ಪೋಲೀಸಿನವರು ಹೇಳಿದಾಗ ನಾನು ಮಾಲಿಯನ್ನು ನೋಡಿ— ಇವರ ಹತ್ತಿರ ಮತ್ತಾರಿದ್ದರು ? ಎಂದೆನು.

ಮಾಲಿ—ಆರೂ ಕಾಣಿಸಲಿಲ್ಲ.

ನಾನು—ಆರಾದರೂ ಓಡಿಹೋಗುವ ಸುಳಿವು ಕಂಡು ಬಂದಿತೋ ?

ಮಾಲಿ—ನಾನು ಅಲ್ಲಿಗೆ ಹೋದಾಗ ಈತನ ಹೊರತು ಮತ್ತಾರೂ ಕಣ್ಣಿಗೆ ಬೀಳಲಿಲ್ಲ. ನಾನು ಬರುವುದಕ್ಕೆ ಮುಂಚೆಯೇ ಕಳ್ಳರು ಓಡಿಹೋಗಿದ್ದರೂ ಹೋಗಿರಬಹುದು. ಅದು ಮಾತ್ರ ನನಿಗೆ ತಿಳಿಯದು. ಅವರು ನನ್ನ ಕೈಗೆ ಸಿಕ್ಕಿದ್ದಿದ್ದರೆ, ಈ ಕಠಾರಿಯಿಂದ ಅವರನ್ನು ತುಂಡು ತುಂಡಾಗಿ ಕತ್ತರಿಸಿ ಬಿಡುತ್ತಿದ್ದೆನು. ಕಳ್ಳಕಾಕರಿಗೆ ನಾನೆಂದಿಗೂ ಹೆದರತಕ್ಕವನಲ್ಲ.

ಮಾಲಿಯು ಹೇಳಿದ ಮಾತಿಗೆ ನನಗೆ ನಗೆ ಬಂದಿತು. ಅನಂತರ ಆವ ವೈದ್ಯನು ವಿನಯನ ಅಂಗ ಪ್ರತ್ಯಂಗಗಳನ್ನು ಪರೀಕ್ಷೆಮಾಡಿದ್ದನೋ, ಆತನಲ್ಲಿಗೆ

ನಾನು ಹೋಗಿ ಪ್ರಶ್ನೆಮಾಡಿದೆನು. ಆತನು ಹೇಳಿದುದೇನಂದರೆ:—"ರಾತ್ರಿ ಹನ್ನೆರಡು ಗಂಟೆಯ ಸಮಯದಲ್ಲಿ ಪೋಲೀಸಿನವರು ಬಂದು ನನ್ನನ್ನು ಭೂತನ ಕಟ್ಟೆಗೆ ಕರೆದುಕೊಂಡು ಹೋದರು. ನಾನು ರೋಗಿಯನ್ನು ಬಗೆ ಬಗೆಯಾಗಿ ಪರೀಕ್ಷಿಸಿ ನೋಡಿದೆನು. ರೋಗಿಯು ಕೇವಲ ಭಯದಿಂದ ಮೂರ್ಛೆ ಹೋಗಿದ್ದಂತೆ ತಿಳಿದು ಬಂದಿತು. ಕಾರಣವೇನೆಂದರೆ—ರೋಗಿಯ ದೇಹದಲ್ಲಿ ಆವ ವಿಧವಾದ ಪೆಟ್ಟಿನ ಗಾಯವೂ ಕಂಡು ಬರಲಿಲ್ಲ."

ಅದಾದ ಮೇಲೆ ನಾನು ವಿನಯಚಂದ್ರನನ್ನು ಕುರಿತು—ನೀವು ಈ ಊರಿಗೆ ಬಂದ ಎರಡುದಿನಕ್ಕೆ ಮುಂಚಿತವಾಗಿಯೇ ಇಲ್ಲಿಗೆ ಬಂದು ಸೇರಿರ ಬೇಕಾಗಿತ್ತಲ್ಲವೇ? ಸಾವಕಾಶಮಾಡಲು ಕಾರಣವೇನು? ಎಂದು ಜಿಜ್ಞಾಸೆ ಮಾಡಿದೆನು.

ವಿನಯ—ಎರಡು ದಿನ ಸಾವಕಾಶವಾದುದೇನೋ ನಿಜ. ನಾನು ದಾರಿಯಲ್ಲಿ ಒಂದು ದಿನದ ಮಟ್ಟಿಗೆ ವಿಶ್ರಾಂತಿಯನ್ನು ತೆಗೆದುಕೊಂಡೆನು; ಮತ್ತೊಂದು ದಿನ ರೈಲು ತಪ್ಪಿದುದರಿಂದ ಸಾವಕಾಶವಾಯಿತು. ನಾನು ಮನಃಪೂರ್ವಕವಾಗಿ ಸಾವಕಾಶಮಾಡಿದವನಲ್ಲ.

ನಾನು ಕೊಟ್ಟ ಟೆಲಿಗ್ರಾಮಿಗೆ ಬಂದ ಉತ್ತರವನ್ನು ವಿನಯನಿಗೆ ಹೇಳುವುದಕ್ಕೆ ನನಗಿಷ್ಟವಿರಲಿಲ್ಲ. ನಾನು ಹೇಳಲೂ ಇಲ್ಲ. ಹಾಗೆ ಹೇಳುವುದು ಪತ್ತೇದಾರರ ಕರ್ತವ್ಯವೂ ಅಲ್ಲ. "ಜಮೀನ್ದಾರರಿಂದ ಏನುತ್ತರ ಬಂದಿತೋ ಅದನ್ನು ದಯವಿಟ್ಟು ತಿಳಿಸಬೇಕು; ನನ್ನ ಮನಸ್ಸು ತತ್ತರಗುಟ್ಟುತ್ತಿರುವುದು," ಎಂದು ವಿನಯನು ಬಹಳವಾಗಿ ನಿರ್ಬಂಧಮಾಡಿದ್ದರ ಮೇಲೆ, ನಾನು—"ಈ ಸಂಗತಿಯನ್ನು ಕೇಳಿ ತುಂಬಾ ವ್ಯಸನವುಂಟಾಯಿತು; ಆದರೂ ಚಿಂತೆಯಿಲ್ಲ; ಮತ್ತೆ ಹಣವನ್ನು ಕಳುಹುವೆನು; ಕೆಲಸವೇನೋ ನಡೆಯುತ್ತಿರಲಿ; ಮತ್ತೇನೂ ವಿಶೇಷವಿಲ್ಲ;" ಎಂಬುದಾಗಿ ಉತ್ತರ ಬಂದಿದೆ ಎಂದು ಹೇಳಿಬಿಟ್ಟೆನು.

ವಿನಯನು ನಾನು ಹೇಳಿದ ಮಾತನ್ನು ಕೇಳಿ—ಹಾಗಾದರೇನು ಗತಿ? ಇದರಿಂದ ನನಗೆ ಉದ್ಧಾರವಾದಂತೆ ಕಂಡು ಬರುವುದಿಲ್ಲ. ಕಳುವಾದ ಹಣವನ್ನು ನನ್ನ ತಲೆಗೇನೇ ಕಟ್ಟುವಂತಿದೆ. ಹಾಗಾಗುವುದಾದರೆ, ನನ್ನ ಮನೆ, ಮಟ, ಜಮೀನ್, ಸಮೀನ್ ಎಲ್ಲವೂ ಆತನ ಕೈವಶವಾಗಿ ಬಿಡುವುದು. ಆಮೇಲೆ ನನ್ನ ಹೆಂಡಿರು ಮಕ್ಕಳು ತಿನ್ನುವುದೇನು? ನಾವು ಕಾಡಿಗೆ ಹೋಗಿ ಗಿಡುಗಳ ಕೆಳಗೆ ವಾಸಮಾಡಲಾದೀತೇ? ಎಂದು ಅಂಗಲಾಚಿಕೊಂಡನು.

ನಾನು ಆತನನ್ನು ಅತಿ ಪ್ರಯಾಸದಿಂದ ಸಂತೈಸಿ—ಹಾಗೆಂದರೇನು ಮಹಾಶಯ? ಕಳ್ಳರು ಹಣವನ್ನು ಕದ್ದುಕೊಂಡು ಹೋದರೆ ಆರ ತಪ್ಪೇನಿದೆ? ನೀವು ಹಣವನ್ನು ಸ್ವಂತಕ್ಕೆ ಉಪಯೋಗಿಸಿಕೊಳ್ಳಲಿಲ್ಲವಷ್ಟೆ? ಹಾಗಾದರೆ ನೀವೇತಕ್ಕೆ ಭಯಪಡಬೇಕು? ನೀವು ನಿಶ್ಚಿಂತರಾಗಿರಿ ; ಏನಿದ್ದರೂ ನಾನು ನೋಡಿಕೊಳ್ಳುವೆನು, ಒಂದು ಸಮಾಧಾನದ ಮಾತುಗಳನ್ನಾಡಿದೆನು.

ವಿನಯನು ನಾನು ಹೇಳಿದ ಮಾತನ್ನು ಕೇಳಿ, ಸುಮ್ಮನಾದರೂ, ಏನೇನೋ ಚಿಂತಿಸಿಕೊಂಡು ಅಧೀರನಾಗುತ್ತಿದ್ದನು. ನನ್ನ ಮಾತಿನಲ್ಲಿ ಆತನಿಗೆ ನಂಬುಗೆ ಹುಟ್ಟಲಿಲ್ಲವೋ, ಇಲ್ಲವೇ, ಮನೆ, ಮಟವೆಲ್ಲವೂ ಹೋದಮೇಲೆ ಮುಂದೇನು ಗತಿ, ಎಂದು ಚಿಂತಿಸುತ್ತಿದ್ದನೋ, ನನಗಾವುದೂ ಗೊತ್ತಾಗಲಿಲ್ಲ.

---

## ಒಂಬತ್ತನೆಯ ವಿಲಾಸ

ಭೂತನಕಟ್ಟೆಯಿಂದ ಎಲ್ಲರೂ ಹಿಂದಿರುಗಿ ಹೊರಟು ಬಂದರು. ಬಳಿಕ ವಿನಯನಿಗೆ ತನ್ನ ಮನೆಗೆ ಹೊರಡುವಂತೆ ಅಪ್ಪಣೆ ಮಾಡಿದೆನು. ಆತನು ಅದರಂತೆಯೇ ಹೊರಟು ಹೋದನು. ನನಗೆ ದಾರಿಯಲ್ಲಿ ಉದ್ದಕ್ಕೂ ಚಿಂತೆಗಿಟ್ಟಿತು:— ಈ ಕಳ್ಳನನ್ನು ಕಂಡುಹಿಡಿಯುವ ಬಗೆ ಹೀಗೆ? ಈ ದಿನದ ವಿಮರ್ಶೆಯಲ್ಲಿ ನನಗಾವ ಮರ್ಮವೂ ಗೊತ್ತಾಗಲಿಲ್ಲ. ದೇವರೇ, ನನ್ನನ್ನು ಈ ವಿಷಮದ ಕೆಲಸದಿಂದ ಹೇಗೆ ಪಾರಗಾಣಿಸುವೆ? ಎಂದು ಮುಂತಾಗಿ ಚಿಂತಿಸುತ್ತಾ ಮನೆಯ ಕಡೆಗೆ ತೆರಳಿದೆನು. ಹೀಗೆ ಎರಡು ಮೂರು ದಿನಗಳು ಕಳೆದುವು. ಆಮೇಲೆ ಒಂದು ದಿನ ನಾನು ವಕೀಲನ ಬಳಿಗೆ ಹೋದೆನು.

ವಕೀಲನು ನನ್ನನ್ನು ನೋಡಿದೊಡನೆಯೇ — ಮಹಾಶಯ! ತಾವೇ ಬರೋಣವಾಯಿತಲ್ಲ! ನಾನು ತಮಗೆ ಕಾಗದವೊಂದನ್ನು ಬರೆಯ ಬೇಕೆಂದಿದ್ದೆನು. ಸರಿಯಾದ ಕಾಲದಲ್ಲಿ ನೀವಾಗಿಯೇ ಬಂದುದಕ್ಕಾಗಿ ನನಗೆ ತುಂಬ ಸಂತೋಷವಾಯಿತು. ಜಮಿನ್ದಾರರಿಂದ ಕಾಗದವೊಂದು ಬಂದಿರುವುದು, ಎಂದು ಹೇಳಿದ ಕೂಡಲೇ ನಾನು ಅತ್ಯಾದರದಿಂದ—ಏನು ವಿಷಯ? ಎಂದು ಕೇಳಿದೆನು.

ವಕೀಲ—ತಾವು ಅಷ್ಟು ಆತುರರಾಗಲು ಕಾರಣವೇನೂ ಇಲ್ಲ; ಈ ಕಾಗದವನ್ನು ತೆಗೆದುಕೊಂಡು ತಾವೇ ಓದೋಣವಾಗಲಿ; ನಾನು ಕೇಳುವೆನು. ಇದರಲ್ಲಿ ನನಗೆ ತಿಳಿಯದೇ ಇರತಕ್ಕ ಅನೇಕ ಸಂಗತಿಗಳಿರುವವು. ತಮಗೇನಾದರೂ ಗೊತ್ತಾಗುವುದಾಗಿದ್ದರೆ ತಿಳಿಸೋಣ ವಾಗಬಹುದು.

ವಕೀಲನ ಅಪ್ಪಣೆಯ ಪ್ರಕಾರ ನಾನು ಕಾಗದವನ್ನು ಬಹಳ ಸಂತೋಷ ದಿಂದ ಓದಿದೆನು.

ಪತ್ರ

ತಮ್ಮಗಳ ಗೋಚರಾರ್ಥವಾಗಿ ಇದರಲ್ಲಿ ನೋಟುಗಳ ನಂಬರುಗಳ ಪಟ್ಟಿ ಯೊಂದನ್ನು ವಿಶದವಾಗಿ ಬರೆದು ಕಳುಹಿರುವೆನು. ಈ ಪಟ್ಟಿಯನ್ನು ಮೊದಲು ಕಳುಹಿದ್ದ ನಂಬರುಗಳೊಡನೆ ಸೇರಿಸಿಟ್ಟು ಕೊಳ್ಳತಕ್ಕದು.

ವಿನಯ ಚಂದ್ರನೊಡನೆ ನಾನು ಕಳುಹಿದ ಹತ್ತು ಸಾವಿರ ರೂಪಾಯಿಗಳು ಕಳ್ಳರ ಪಾಲಾಗಿ ಹೋಗುವುದೆಂದು ನನಗೆ ನಂಬುಗೆ ಇರಲಿಲ್ಲ. ಕಾರಣ ವೇನಂದರೆ:—ನನ್ನ ಜಮಿನ್ದಾರಿಯಲ್ಲಿ ಎಷ್ಟು ಹುಡುಕಿದರೂ, ಆತನಂತಹ ಚಟುವಟಿಕೆಯಾದ ಕಾರ್ಯ ಸಮರ್ಥನು ಸಿಕ್ಕುವುದೇ ಅಸಂಭವವು. ವಿನಯನು ಮೈಮರೆತನೆಂಬುದನ್ನು ನಾನಾವಾಗಲೂ ನೋಡಿಯೂ ಇಲ್ಲ, ಕೇಳಿಯೂ ಇಲ್ಲ; ಜನರು ಎಷ್ಟು ಎಚ್ಚರಿಕೆಯಿಂದಿದ್ದರೂ ಒಂದೊಂದು ವೇಳೆ ಮೋಸ ಹೋಗುವು ದುಂಟು. ವಿನಯನಿಗೂ ಈ ರೀತಿಯಾಗಿ ಸಂಭವಿಸಿದ್ದರೂ ಇರಬಹುದು. ಒಂದೊಂದು ವೇಳೆ ಜ್ಞಾನಿಗಿಂತಲೂ ದಡ್ಡನೇ ಅತಿಶಯವಾಗಿ ಶೋಭಿಸುವನು. ಈ ದೈವ ಚಿತ್ರವನ್ನರಿತವರಾರು!

ಈ ಸಂಗತಿಯನ್ನು ಪೋಲೀಸಿಗೆ ತಿಳಿಸಿರುವಿರೆಂಬುದನ್ನು ಕೇಳಿ ನನಗೆ ಬಹಳ ಸಂತೋಷವಾಯಿತು. ಆವ ಪತ್ತೇದಾರರು ಈ ಕಾರ್ಯದ ಭಾರವನ್ನು ಶಿರಸಾ ವಹಿಸಿರುವರೋ, ಅವರ ಹೆಸರನ್ನೂ ನಾನು ಅಡಿಗಡಿಗೂ ಕೇಳಿರುವೆನಲ್ಲದೆ, ಆಗಿಂದಾಗ ವರ್ತಮಾನ ಪತ್ರಿಕೆಗಳಲ್ಲಿ ಆತನು ಪತ್ತೇದಾರಿಯ ವಿಷಯ ದಲ್ಲಿ ತೋರಿಸಿದ ಅದ್ಭುತವಾದ ಸಾಹಸಗಳನ್ನೂ ಓದಿಯೋದಿ ಹಿಗ್ಗುತ್ತಿರುವೆನು. ಆ ಮಹಾಶಯರಿಗೆ ತಾವು ದಯೆಯಿಟ್ಟು ತಿಳಿಯಪಡಿಸಬೇಕಾದುದೇನೆಂದರೆ:— ಅವರು ಕೈಕೊಂಡ ಕೆಲಸವನ್ನು ಎಷ್ಟು ಶ್ರಮಪಟ್ಟು ಸಾಂಗವಾಗಿ ನೆರವೇರಿಸು ವರೋ ಅಷ್ಟು ವಿಶೇಷವಾಗಿ ನನ್ನಿಂದ ಪುರಸ್ಕಾರವನ್ನೂ ಹೊಂದುವರು.

ಇದೂ ಅಲ್ಲದೆ, ನನ್ನ ಬಂಧುವಿನೊಬ್ಬನ ಹದಿನಾರು ವರ್ಷ ವಯಸ್ಸಿನ ಸೌಂದರ್ಯವುಳ್ಳ ವಿಧವೆಯಾದ ಮಗಳೊಬ್ಬಳು ಮನೆಯನ್ನು ತ್ಯಾಗಮಾಡಿ ಎಲ್ಲಿಯೋ ಓಡಿಹೋಗಿರುವಳು. ಆರು ಕಳುವಾದ ನಮ್ಮ ಧನದ ಅನುಸಂಧಾನದಲ್ಲಿ ಪ್ರವರ್ತಕರಾಗಿರುವರೋ ಅವರಿಗೇನೇ ಈ ಕಾರ್ಯದ ಭಾರವನ್ನೂ ವಹಿಸಬೇ ಕೆಂದಿರುವೆನು. ನಮ್ಮ ಬಂಧುವಾದರೋ ಕುಲಚ್ಯುತೆಯಾದ ಮಗಳನ್ನು ಮತ್ತೆ ಮನೆಗೆ ಸೇರಿಸುವುದಿಲ್ಲ. ಒಂದು ವೇಳೆ ಮಗಳೆಂಬ ವಾತ್ಸಲ್ಯದಿಂದ ತಂದೆಯಾ

ದವನು ಗುಟ್ಟಾಗಿ ಸೇರಿಸಿದರೂ ಸೇರಿಸ ಬಹುದು. ಸಮಾಜವಾದರೋ ಅಂತಹ ಕೆಲಸಗಳಿಗೆ ಎಂದಿಗೂ ಆಸ್ಪದ ಕೊಡತಕ್ಕುದಾಗಿಲ್ಲ. ನಮ್ಮ ಬಂಧುವಿಗೆ ಮಗಳು ಕೆಟ್ಟು ಹೋದಳೆಂಬ ವ್ಯಸನವೇನೂ ಇಲ್ಲ. ದುಷ್ಟರ ಸಹವಾಸದಿಂದ ಸಾಧುಗಳೂ ಅಸಾಧುಗಳಾಗುತ್ತಾರಾದುದರಿಂದ, ದುಷ್ಟರಾದವರನ್ನು ಕಂಡುಹಿಡಿದು ದಂಡಿಸ ಬೇಕೆಂಬುದೇ ಆತನ ಪರಮೋದ್ದೇಶವು. ಇದಕ್ಕಾಗಿಯೇ ಆತನು ಎಷ್ಟು ಹಣ ವಾದರೂ ವೆಚ್ಚವಾಗಲಿ, ತಾನು ಕೊಡಲು ಸಿದ್ಧನಾಗಿರುವೆನೆಂದು ನನ್ನ ಮುಂದೆ ಹೇಳಿರುವನು. ಹಣಕಾಸುಗಳನ್ನು ಮೊದಲು ಬೇಕಾದರೆ ಮೊದಲೇ ಕೊಡು ವನು; ಇಲ್ಲವೇ ಆವಾಗ ಕೇಳಿದರೆ ಆಗಲೇ ಕೊಡಲುಳ್ಳವನು.

ಕನ್ಯೆಯ ಹೆಸರು ರಾಧೆ. ಆಕೆಯ ತಂದೆಯು ವಿಶ್ವಾಸಕ್ಕಾಗಿ ಆಕೆಯನ್ನು ಯಶೋದೆ ಎಂದು ಕರೆವನು. ಆಕೆಗೆ ಹದಿನಾರನೆಯ ವರ್ಷವು ತುಂಬುತ್ತಿದ್ದಿತು. ಆಕೆಯ ರೂಪವನ್ನು ನೋಡುವುದಕ್ಕೆ ಎರಡು ಕಣ್ಣುಗಳು ಸಾಲವು. ಆಕೆಯನ್ನು ಸರ್ವಾಂಗ ಸುಂದರಿ ಎಂದು ಹೇಳಿದರೂ ಆ ರೂಪವನ್ನು ಸಂಪೂರ್ಣವಾಗಿ ವರ್ಣಿಸಿ ದಂತಾಗುವುದಿಲ್ಲ. ಆಕೆಗೆ ಸುಮಾರು ಒಂಬತ್ತನೆಯ ವರುಷದಲ್ಲಿ ಮದುವೆಯ ಶಾಸ್ತ್ರವಾಯಿತು. ಗಂಡನ ಹೆಸರು ಯದುನಂದನ. ಮದುವೆಯಾದ ಐದುವರುಷ ದೊಳಗಾಗಿಯೇ ಆಕೆಯ ಪತಿಯು ಸ್ವಾಮಿ ಪಾದಾರವಿಂದವನ್ನು ಸೇರಿಬಿಟ್ಟನು. ಯದುನಂದನನು ಬದುಕಿರುವಾಗ ಹೆಂಡಿತಿಯನ್ನು ಬಹಳ ಅಕ್ಕರೆಯಿಂದ 'ವಿನೋ ದಿನಿ' ಎಂದು ಕರೆಯುತ್ತಿದ್ದನು. ಆತನು ಆಕೆಗೆ ವಿನೋದಿನಿ ಎಂಬ ಹೆಸರಿನಲ್ಲಿಯೇ ಕಾಗದವನ್ನು ಬರೆಯುತ್ತಿದ್ದನು. ವಿಧವೆಯಾದ ಕನ್ಯೆಗೆ ಅಂತೂ ರಾಧಾ, ಯಶೋದಾ, ವಿನೋದಿನಿ, ಎಂದು ಮೂರು ಹೆಸರುಗಳಿದ್ದವು. ನಾನು ಆವ ಹುಡುಗಿಯ ವಿಷಯವನ್ನು ಬರೆಯುತ್ತಿರುವೆನೋ, ಆತನ ತಂದೆಯು ಒಬ್ಬ ಕೊಬ್ಬಿದ ಜಮೀನ್ದಾರನು. ಈ ವಿಷಯದಲ್ಲಿ ಕೈಹಾಕುವುದಾದರೆ ಅನೇಕ ವಿಧ ದಲ್ಲಿ ಪ್ರಯೋಜನವುಂಟೆಂದು ತಮ್ಮ ಪತ್ತೇದಾರರಿಗೆ ದಯೆಯಿಟ್ಟು ತಿಳಿಸಬೇಕು.

ಇದಲ್ಲದೆ ಮತ್ತೊಂದು ವಿಷಯ. ಆವ ದಿನ ವಿನಯನು ಇಲ್ಲಿಂದ ಬಿಟ್ಟು ಹೊರಟನೋ, ಅದೇ ದಿನವೇ ಈ ಹುಡುಗಿಯೂ ಪಲಾಯನವಾಗಿರುವಳು. ಇದಕ್ಕೆ ವಿನಯನೇ ಕಾರಣವೆಂದು ಅನೇಕರು ಆತನನ್ನು ನಿಂದಿಸುತ್ತಿರುವರು. ವಿನಯನ ವಿಷಯದಲ್ಲಿ ನನ್ನ ಅಭಿಪ್ರಾಯ ಹೇಗಾದರೂ ಇರಲಿ; ಈ ನಿಂದೆಯೇನೋ ಆತನಿಗೆ ತಪ್ಪಿದುದಲ್ಲ. ಜನಗಳ ಊಹೆಯು ನಿಜವೋ, ಸುಳ್ಳೋ, ಅದನ್ನು ಕಟ್ಟಿ ಕೊಂಡು ನಮಗಾಗುವುದೇನು? ತಾವು ಮಟ್ಟಿಗೆ ಆತನ ವಿಷಯದಲ್ಲಿ ಎಚ್ಚರಿಕೆ ಯಿಂದಲೇ ನಡೆದುಕೊಳ್ಳಬೇಕೆಂದು ನನ್ನ ಅಭಿಪ್ರಾಯವು.

ಆದುದರಿಂದ ಮೇಲೆ ಹೇಳಿದ ಈ ಎರಡು ವಿಷಯಗಳಲ್ಲಿಯೂ, ನೀವು ಯತ್ನಪರರಾಗಬೇಕೆಂಬುದೇ ನನ್ನ ಪ್ರಾರ್ಥನೆ. ಈ ಕೆಲಸಕ್ಕಾಗಿ ಎಷ್ಟು ದ್ರವ್ಯವು ವ್ಯಯವಾಗುವುದಾದರೂ ಅದನ್ನು ನಾವಿಬ್ಬರೂ ಸೇರಿ ಕೊಡುವೆವು. ಕಾರ್ಯೋದ್ಧಾರಕ್ಕಾಗಿ ವಿನಯನ ವಿಷಯಗಳು ತಮಗೆ ತಿಳಿಯಬೇಕೆಂದು ಇಷ್ಟವಿರುವುದಾದರೆ, ಅದೆಲ್ಲಕ್ಕೂ ಕಾಗದ ಬರೆದರೆ ಕೂಡಲೆಯೇ ಉತ್ತರ ಬರೆಯುವೆನು. ಕೊನೆಯ ಮಾತೇನೆಂದರೆ:—ಸಾಧ್ಯವಾದಷ್ಟು ಮಟ್ಟಿಗೆ ಈ ಸಂಗತಿಗಳೆಲ್ಲವನ್ನೂ ಗೋಪ್ಯವಾಗಿಟ್ಟುಕೊಂಡಿರುವುದೇ ಮಂಗಳಕರವೆಂದು ನನ್ನ ಭಾವನೆಯು.

ಇತಿ ಮಂಗಳಾಕಾಂಕ್ಷಿ,
ರಾಜರಾಜೇಶ್ವರ ಚಕ್ರವರ್ತಿ.

ಈ ರೀತಿಯಾಗಿ ಬರೆದಿದ್ದ ಕಾಗದವನ್ನು ನಾನು ಓದಿದೆನು. ವಕೀಲನು ಆನಂದದಿಂದ ಇದೆಲ್ಲವನ್ನೂ ಆದ್ಯೋಪಾಂತವಾಗಿ ಕೇಳಿ—ಮಹಾಶಯ, ತಾವು ಈ ಎರಡು ಕಾರ್ಯಗಳನ್ನೂ ವಹಿಸಲು ಅಭ್ಯಂತರವೇನೂ ಇಲ್ಲವಷ್ಟೇ? ಎಂದು ಕೇಳಿದನು.

ನಾನು—ಅಡ್ಡಿಯೇನೂ ಇರುವುದಿಲ್ಲ. ನಾನು ಇವೆರಡನ್ನೂ ವಹಿಸಿಕೊಳ್ಳುವೆನು. ಇಷ್ಟರೊಳಗೆ ವಿನಯಚಂದ್ರನು ತಮ್ಮಲ್ಲಿಗೆ ಬಂದಲ್ಲಿ, ಈ ಸಂಗತಿಗಳಾವುವನ್ನೂ ಆತನಿಗೆ ಮಟ್ಟಿಗೆ ತಿಳಿಸಕೂಡದೆಂದು ನನ್ನ ಪ್ರಾರ್ಥನೆ. ತಾವು ಜಮೀನ್ದಾರರಿಗೆ ಒಂದು ಕಾಗದವನ್ನು ಬರೆದು, 'ವಿನಯಚಂದ್ರನಿಗೆ ಆವ ಕಾರ್ಯವನ್ನು ನಿಯಮಿಸಿ ಇಲ್ಲಿಗೆ ಕಳುಹೋಣವಾಗಿದೆ? ಎಂಬ ಬಗೆಗೆ ಉತ್ತರವನ್ನು ತರಿಸಿಕೊಳ್ಳಬೇಕು. ಏತಕೆಂದರೆ—ವಿನಯನು ಈ ಸ್ಥಳವನ್ನು ಬಿಟ್ಟು ತಮ್ಮೂರಿಗೆ ಮತ್ತೆ ಹೋಗಲು ಯತ್ನ ಮಾಡಿದಂತೆಯೇ ಕಂಡು ಬರುವುದಿಲ್ಲ. ಆದುದರಿಂದ ನನಗೆ ಸಂಶಯ ಉಂಟಾಗಿದೆ. ವಕೀಲನು ನನ್ನ ಇಷ್ಟದಂತೆಯೇ ಕಾಗದ ಬರೆಯುವೆನೆಂದು ಹೇಳಿದ ಮೇಲೆ ನಾನು ಆತನಿಂದ ಅಪ್ಪಣೆಯನ್ನು ತೆಗೆದುಕೊಂಡು ಮನೆಗೆ ಹೊರಟು ಬಂದೆನು.

---

## ಹತ್ತನೆಯ ವಿಲಾಸ

ಎರಡು ಮೂರು ದಿನಗಳು ಮೇಲೆ ಮೇಲೆ ಕಳೆದು ಹೋದುವು; ಆದರೂ ವಿನಯನ ವಿಷಯವಾಗಿ ಆವ ಮರ್ಮವೂ ಗೊತ್ತಾಗಲಿಲ್ಲ. ಆತನ ಶೀಲ ಸ್ವಭಾವಗಳನ್ನು ನೋಡಿದುದರಲ್ಲಿ ಆವ ದುರ್ಗುಣವೂ ಕಂಡು ಬರಲಿಲ್ಲ. ಬೇರೆ ಬೇರೆಯ

ಕಾಲಗಳಲ್ಲಿ ಬೇರೆ ಬೇರೆಯ ವೇಷಗಳಿಂದ ಆತನ ಹಿಂದೆ ಹಿಂದೆಯೇ ತಿರುಗಿ ತಿರುಗಿ ಆತನನ್ನು ಬಗೆ ಬಗೆಯಾಗಿ ಪರೀಕ್ಷಿಸಿ ನೋಡಿದೆನು. ಇವಾವುದರಿಂದಲೂ ನನ್ನ ಮನೋರಥವು ಈಡೇರಲಿಲ್ಲ. ಇದರಿಂದ ವಿನಯನು ಬಹಳ ಚುರುಕಾದ ಮನುಷ್ಯನಿರಬೇಕೆಂದೂ, ಸಾಮಾನ್ಯರಂತೆ ಈತನು ದಡ್ಡನಲ್ಲವೆಂದೂ ನಾನು ಊಹಿಸುವುದಕ್ಕೆ ಕಾರಣವಾಯಿತು. ಆತನು ವಾಸವಾಗಿರುವ ಮನೆಗೆ ಹೋಗಿ ಕೆಲವು ವಿಷಯಗಳನ್ನಾದರೂ ತಿಳಿದುಕೊಂಡು ಬರೋಣವೆಂದೂ ಆಲೋಚಿಸಿ ಅಲ್ಲಿಗೆ ಹೊರಟೆನು. ಅಲ್ಲಿ ವಿಚಾರಿಸಿದುದರಲ್ಲಿ, ಆತನು ವಾಸವಾಗಿರುವ ಮನೆಯ ಯಜಮಾನನ ಹೆಸರು ನವಮೋಹನರಾಯನೆಂದು ತಿಳಿದು ಬಂದಿತು.

ನವಮೋಹನನ ವಯಸ್ಸು ಸುಮಾರು ಇಪ್ಪತ್ತೈದು, ಇಪ್ಪತ್ತಾರು ಇರ ಬಹುದು. ಆತನು ಬಿ. ಎ. ಪರೀಕ್ಷೆಗೆ ತಯಾರಾಗುತ್ತಿದ್ದನು. ಏಳೆಂಟು ತಿಂಗಳು ಗಳ ಹಿಂದೆ ಆತನ ತಂದೆಯು ಮಡಿದು ಹೋದುದರಿಂದ ತಂದೆಗೆ ಕೊಟ್ಟ ತಿಲ ತರ್ಪಣ ದೊಡನೆಯೇ ವಿದ್ಯೆಗೂ ತರ್ಪಣವನ್ನು ಕೊಟ್ಟುಬಿಟ್ಟನು. ಆತನ ತಂದೆಯು ನಂದಿಗ್ರಾಮದಲ್ಲಿ ಒಬ್ಬ ಸಣ್ಣ ಜಮೀನ್ದಾರನಾಗಿದ್ದನು. ತಂದೆಯು ಬದುಕಿರುವ ವರೆಗೂ ಮಗನ ವಿದ್ಯಾಭ್ಯಾಸಕ್ಕಾಗಿ ಹಣವನ್ನು ಕೊಡುತ್ತಿದ್ದನು. ನವಮೋಹನನ ಹತ್ತಿರ ಹಣವಿರುತ್ತಿದ್ದುದನ್ನು ಕಂಡು ದಿನ ದಿನಕ್ಕೂ ಸ್ನೇಹಿತರು ಹೆಚ್ಚುತ್ತಾ ಬಂದರು. ಸ್ನೇಹಿತರು ಹೆಚ್ಚಿದ ಹಾಗೆಲ್ಲಾ ಕೆಟ್ಟ ನಡತೆಯು ಒಂದರ ಮೇಲೊಂದು ತಲೆದೋರಲಾರಂಭಿಸಿತು. ಕಟ್ಟಕಡೆಗೆ ನವಮೋಹನನು ದುರ್ವೃತ್ತಿಯ ಎಲ್ಲೆಯೆನಿಸಿದ ಅಪೇಯಪಾನ, ಅಭಕ್ಷ್ಯ ಭಕ್ಷಣ, ಅಗಮ್ಯಾಗಮನಗಳಲ್ಲಿ ಕಾಲಿಟ್ಟನು. ತಂದೆಯಾದವನು ಬದುಕಿರುವಷ್ಟು ದಿನಗಳೂ ಈತನ ಕಾರ್ಯಗಳು ಗೋಪ್ಯದಲ್ಲಿರುತ್ತಿದ್ದುವು. ತಂದೆಯು ಗತಿಸಿದ ಮೇಲೆ ನವಮೋಹನನು ಸ್ವೇಚ್ಛಾ ಚಾರಿಯಾದನು. ತಂದೆಯ ಅನಂತರ ಜಮೀನ್ದಾರಿಯಲ್ಲಿ ಬಹಳವಾಗಿ ಮಾರ್ಪಾಟು ಗಳನ್ನು ಮಾಡಬೇಕೆಂದೆಣಿಸಿ, ಬಹುಕಾಲದಿಂದಲೂ ಆಕ್ಷೇಪಣೆಯಿಲ್ಲದೆ ಕೆಲಸ ಮಾಡಿಕೊಂಡು ಬರುತ್ತಿದ್ದ, ಪಕ್ಕಾ ಲೆಕ್ಕಾಚಾರಸ್ಥರಾದ ಗುಮಾಸ್ತರುಗಳನ್ನು ಕಿತ್ತುಹಾಕಿ ಅವರ ಸ್ಥಾನಗಳಲ್ಲಿ ತನ್ನ ಸ್ನೇಹಿತರನ್ನು ನಿಯಮಿಸಿದನು. ಜಮೀನ್ದಾರಿಯ ಕೆಲಸವಾದರೋ ಆವುದೋ ಒಂದು ಬಗೆಯಾಗಿ ನಡೆಯುತ್ತಿದ್ದಿತು. ಹಳಬರಾಗಿದ್ದ ಗುಮಾಸ್ತರ ಬಾಯಿಗೆ ಮಣ್ಣು ಬಿದ್ದಿತೇ ಹೊರತು, ಮಿಕ್ಕ ಕೆಲಸ ಗಳೆಲ್ಲವೂ ಹೇಗೋ ಹಾಗೆ ನಡದೇ ಹೋಗುತ್ತಿದ್ದುವು. ನವಮೋಹನನ ಕಾಲ ದಲ್ಲಿ ಮಾಡಿದ ಬದಲಾವಣೆಯಾದರೋ ಈರೀತಿಯಾಗಿದ್ದಿತು—ಬಂಜರು ಭೂಮಿ ಗಳೆಲ್ಲವೂ ಸಾಗುವಳಿಗೆ ಸಿದ್ಧವಾದುವು ; ಸಾಗುವಳಿಯಲ್ಲಿದ್ದ ಜಮೀನುಗಳೆಲ್ಲವೂ ಬಂಜರುಗಳಾಗಿ ಹೋದುವು.

---

## ಹನ್ನೊಂದನೆಯ ವಿಲಾಸ

ನಮ್ಮ ಪೂರ್ವಪರಿಚಿತನಾದ ವಿನಯನು ನವಮೋಹನನ ಮನೆಯಲ್ಲಿಯೇ ಇದ್ದುಕೊಂಡಿದ್ದನು. ವಿನಯನೂ ನವಮೋಹನನೂ ಅಂತರ್ಯಕ್ಕೆ ಸೇರಿದ ಸ್ನೇಹಿತರಾಗಿದ್ದುದು ನನಗೆ ತಿಳಿಯಬಂದಿತು. ಇವರಿವರ ಅಂತರ್ಯವನ್ನು ಭೇದಿಸಿ ತಿಳಿದುಕೊಳ್ಳಬೇಕೆಂದು ನಾನು ನಾನಾ ಪ್ರಕಾರವಾಗಿ ಯತ್ನ ಮಾಡ ಲಾರಂಭಿಸಿದೆನು.

ನಾನು ತತ್ತ್ವವನ್ನು ತಿಳಿಯಲೋಸುಗ ಕಾದುಕೊಂಡಿರುವಲ್ಲಿ, ಒಂದು ದಿನ ಸಾಯಂಕಾಲ ವಿನಯನೂ ನವಮೋಹನನೂ ಇಬ್ಬರೂ ಸೇರಿಕೊಂಡು ಮನೆಯನ್ನು ಬಿಟ್ಟು ಹೊರಗೆ ಹೊರಟರು. ಬಳಿಕ ಅವರು ಒಂದು ಗಾಡಿಯನ್ನು ಬಾಡಿಗೆಗೆ ತೆಗೆದು ಅದರಲ್ಲಿ ಕುಳಿತುಕೊಂಡು ಎಲ್ಲಿಗೋ ಹೊರಟರು. ನಾನೂ ಮತ್ತೊಂದು ಗಾಡಿಯನ್ನು ಮಾಡಿಕೊಂಡು ಅವರ ಹಿಂದೆ ಹಿಂದೆಯೇ ಏನೋ ಕೆಲಸವಿದ್ದವನಂತೆ ಹೊರಟೆನು. ಮುಂದಿನ ಗಾಡಿಯು ಎಲ್ಲಿಗೆ ಹೋಗುವುದೋ ತನ್ನ ಗಾಡಿಯನ್ನೂ ಅಲ್ಲಿಗೆ ಹೊಡೆಯುವುದಾದರೆ, ಏನಾದರೂ ಬಹುಮಾನವನ್ನು ಕೊಡುವೆನೆಂದು ಗಾಡಿಯವನಿಗೆ ನಾನು ಹೇಳಲಾಗಿ, ಅವನು ಅದೇ ರೀತಿಯಲ್ಲಿಯೇ ಮಾಡ ತೊಡಗಿದನು. ನವಮೋಹನನು ಗಾಡಿಯನ್ನು ಹೊಡೆಯಿಸಿಕೊಂಡು ನೆಟ್ಟಗೆ ರೈಲು ಸ್ಟೇಷನಿಗೆ ಬಂದು ಸೇರಿದನು. ಅವನ ಹಿಂದೆಯೇ ನನ್ನ ಗಾಡಿಯೂ ಬಂದು ಸೇರಿತು. ನಾನು ಸ್ಟೇಷನ್ನಿಗೆ ಬಂದಕೂಡಲೇ ನನ್ನ ಪೂರ್ವಾರ್ಜಿತ ಪುಣ್ಯ ದಿಂದಲೋ ಎಂಬಂತೆ ನನ್ನ ಪರಮಮಿತ್ರನಾದ ಪತ್ತೇದಾರನೊಬ್ಬನು ನನ್ನನ್ನು ಇದಿರುಗೊಂಡನು. ಆತನು ನನ್ನಂತೆಯೇ ಏನೋ ಕೆಲಸದ ನಿಮಿತ್ತವಾಗಿ ಅಲ್ಲಿಗೆ ಬಂದಿದ್ದನು. ನಾನು ಆತನ ಯೋಗಕ್ಷೇಮವನ್ನು ವಿಚಾರಿಸಿದ ಬಳಿಕ, ವಿನಯ ನವಮೋಹನರಿಬ್ಬರನ್ನೂ ಅವನಿಗೆ ತೋರಿಸಿ "ಇವರಿಬ್ಬರೂ ಆವ ಊರಿಗೆ ಟಿಕೆಟ್ಟು ತೆಗೆದುಕೊಳ್ಳುವರೆಂಬುದನ್ನು ತಿಳಿದುಕೊಂಡು ಬರಬೇಕು," ಎಂದು ಕೇಳಿಕೊಂಡೆನು. ಆತನು ಆ ಕೂಡಲೆಯೇ ಹೊರಟುಹೋದನು. ನಾನು ಒಂದು ಕಡೆಯಲ್ಲಿ ಮರೆಯಾಗಿ ಆತನನ್ನು ನಿರೀಕ್ಷಿಸಿಕೊಂಡು ನಿಂತಿದ್ದೆನು. ನನ್ನ ಸ್ನೇಹಿ ತನು ಕೊಂಚ ಹೊತ್ತಿನಲ್ಲಿಯೇ ಹಿಂದಿರುಗಿ ಬಂದು, "ಅವರು ನಾಗಪುರಕ್ಕೆ ಟಿಕೆಟ್ಟು ತೆಗೆದುಕೊಂಡರು," ಎಂದು ಹೇಳಲಾಗಿ ನಾನು ಆತನಿಗೆ ಅನೇಕ ಧನ್ಯ ವಾದಗಳನ್ನು ಹೇಳಿ ಕಳುಹಿಸಿಕೊಟ್ಟೆನು.

ಅವರಿಬ್ಬರೂ ರೈಲನ್ನು ಹತ್ತಿದಮೇಲೆ, ನಾನೂ ನಾಗಪುರಕ್ಕೆ ಎರಡನೇ ತರಗತಿಯ ಟಿಕೆಟ್ಟು ತೆಗೆದುಕೊಂಡು ಅವರ ಹಿಂದಿನ ಗಾಡಿಯಲ್ಲಿಯೇ ಕುಳಿತು ಕೊಂಡೆನು. ರೈಲು ಹೊರಟಿತು. ನಾವು ಕಾಲಕ್ಕೆ ಸರಿಯಾಗಿ ನಾಗಪುರಕ್ಕೆ ಬಂದು

ಸೇರಿದೆವು. ಮೊದಲು ನಾನು ರೈಲನ್ನು ಇಳಿದು ಹೊರಗೆ ಹೋಗಿ ನನ್ನ ವೇಷ ವನ್ನು ಮಾರ್ಪಡಿಸಿ ಒಬ್ಬ ಬಡವನಂತೆ ವೇಷವನ್ನು ತಾಳಿ, ಆರಿಗೂ ಕಾಣಿಸದ ಹಾಗೆ ಒಂದು ಕಡೆಯಲ್ಲಿ ನಿಂತು ಇವರ ಆಗಮನವನ್ನೇ ನಿರೀಕ್ಷಿಸಿಕೊಂಡಿದ್ದೆನು. ನಾಲ್ಕೈದು ನಿಮಿಷಗಳೆನ್ನುವುದರೊಳಗಾಗಿಯೇ ಈ ಮಹನೀಯರು ಹೊರಗೆ ಬಿಜಯಮಾಡಿಸಿದರು. ಇವರು ಒಂದು ಕುದುರೆ ಗಾಡಿಯನ್ನು ಮಾತನಾಡಿ ಅದ ರಲ್ಲಿ ಕುಳಿತರು. ಗಾಡಿಯು ಗಡಗಡನೆ ಹೊರಟಿತು. ಗಾಡಿಯ ಹಿಂದೆ ನಾನೂ ಶಬ್ದವಿಲ್ಲದೆ ಸೇವಕನಂತೆ ಕುಳಿತುಕೊಂಡೆನು. ನನ್ನ ಪುಣ್ಯಕ್ಕೆ ಇದು ಗಾಡಿಯವ ನಿಗೂ, ಗಾಡಿಯಲ್ಲಿದ್ದವರಿಗೂ ಗೊತ್ತಾಗಲಿಲ್ಲ. ಅರ್ಧ ಘಂಟೆಯ ಹೊತ್ತಿನಲ್ಲಿ ಗಾಡಿಯು ಒಂದು ತೋಟದ ಹತ್ತಿರಕ್ಕೆ ಹೋಗಿ ನಿಲ್ಲಲು, ನಾನು ಸರಸರನೆ ಗಾಡಿ ಯಿಂದಿಳಿದು ಒಂದು ಗಿಡದ ಮರೆಯಲ್ಲಿ ನಿಂತುಕೊಂಡುಬಿಟ್ಟೆನು.

---

## ಹನ್ನೆರಡನೆಯ ವಿಲಾಸ

ನಾನು ಗಾಡಿಯಿಂದಿಳಿದಾಗ ರಾತ್ರಿ ಸುಮಾರು ಎಂಟು ಗಂಟೆಯಾಗಿದ್ದಿತು. ಮ್ಯುನಿಸಿಪಲ್ ಲಾಂದ್ರಗಳಲ್ಲಿ ದೀಪವು ಮಿಣಕ್ ಮಿಣಕ್ ಎಂದು ಮಿನು ಗುಟ್ಟುತ್ತಿದ್ದುವು. ಆ ಅಂಧಕಾರದಲ್ಲಿ ಒಬ್ಬರ ಮುಖವು ಮತ್ತೊಬ್ಬರಿಗೆಕಾಣಿ ಸುತ್ತಿರಲಿಲ್ಲ.

ವಿನಯನೂ ನವಮೋಹನನೂ ಗಾಡಿಯಲ್ಲಿದ್ದಾಗ ಆವಾವುದೋ ಮಾತ ನಾಡುತ್ತಿದ್ದರು. ನಾನು ಕಿವಿಯಲ್ಲಿ ಕಿವಿಕೊಟ್ಟುಕೊಂಡು ಕೇಳುತ್ತಿದ್ದರೂ, ಅವರು ಆಡುತ್ತಿದ್ದ ಮಾತುಗಳೆಲ್ಲವೂ ಗಾಡಿಯ ಗಡಗಡ ಶಬ್ದದಿಂದ ನನಗೆ ಕೇಳ ಬರಲಿಲ್ಲ. ಆದರೂ ಅವರ ಮಾತುಗಳಲ್ಲಿ ಕೇಳಿದಷ್ಟನ್ನು ಮಾತ್ರವೇ ನಮ್ಮ ವಾಚಕರ ಅವಗಾಹನೆಗಾಗಿ ಇಲ್ಲಿ ತಿಳಿಸುವೆವು.

ಸಂಭಾಷಣೆ

ವಿನಯ—ರಾಮದಾಸನು ಹೆಚ್ಚಾಗಿ ಹಣವನ್ನು ಕೇಳುವನು.

ನವಮೋಹನ—ಅವನು ಕೇಳುವುದೆಷ್ಟು ?

ವಿನಯ—ಐದುನೂರು ರೂಪಾಯಿಗಳಿಗೆ ಕಡಿಮೆ ಯಾಗುವುದಾದರೆ, ಅವನು ಈ ಕೆಲಸದಲ್ಲಿ ಕೈ ಹಾಕುವುದೇ ಇಲ್ಲವೆಂದು ಹಠ ಹಿಡಿದಿರುವನು.

ನವಮೋಹನ—ಅದೇನು ?

ವಿನಯ—ಅವನು ಆರಾರ ಬಾಯಿಗೋ ಕೊಂಚ ಕೊಂಚ ಹಾಕ ಬೇಕಂತೆ. ಒಬ್ಬನಿಂದಲೇ ಆ ಕೆಲಸವು ಆಗುವ ಹಾಗಿಲ್ಲವೆಂದು ಅವನು ನನಗೆ ತಿಳಿಸಿದನು.

ನವಮೋಹನ—ಅವನು ಆಕೆಯನ್ನು ಸಾಗಿಸಿಕೊಂಡು ಬಂದ ಬಗೆ ಹೇಗೆ?

ವಿನಯ— ಅರಿಚಿಕೊಳ್ಳುವುದಕ್ಕೂ ಅವಕಾಶವಿಲ್ಲದಂತೆ ಆಕೆಯ ಬಾಯಿಗೆ ಬಟ್ಟೆಯನ್ನು ತುರುಕಿ, ಇಬ್ಬರು ಮೂಟೆಯಂತೆ ಹೊತ್ತುಕೊಂಡು ಊರಾಚೆ ಇರುವ ಅವಧೂತನ ದಿಣ್ಣೆಯಲ್ಲಿ ತಂದುಹಾಕಿ, ಆಮೇಲೆ ಬಾಯನ್ನು ಬಿಚ್ಚಿದರು.

ನವಮೋಹನ—ಹಾಗೆಯೇ! ಅಯ್ಯೋಪಾಪ! ಅವರಿಗೆಷ್ಟೋ ಕಷ್ಟ ವಾಗಿರಬೇಕು.

ವಿನಯ—ಹಾಗೆ ಮಾಡದೇ ಇದ್ದಿದ್ದರೆ, ಅದು ಸಾಧ್ಯವೇ ಆಗುತ್ತಿರಲಿಲ್ಲ. ನಮ್ಮ ಮೊಸರಿನ ಮಾದಿ, ಹಾಲಿನ ಕೆಂಪಿ, ಕೂಲಿಯ ಕಾಳಿ, ನಿಂಗನ ತಂಗಿ, ಕೆಂಚನ ನಂಜಿ, ಇವರೆಲ್ಲರೂ ಈ ಕೆಲಸದಲ್ಲಿ ಎಷ್ಟು ಸಾಹಾಯ್ಯಮಾಡಿರುವರೋ ಅದನ್ನು ಹೇಳಿದರೆ ತೀರೀತೆ? ಅವರಿಗಿನ್ನೂ ಬಹಳ ಸಂಗತಿಗಳು ಗೊತ್ತು.

ನವ—ಅವನಿಗೆ ಐದುನೂರು ರೂಪಾಯಿಗಳಾದರೂ ಕೊಡಬಹುದು. ರಾಧಾಮಣಿಯು ನಮ್ಮ ವಶವಾಗುವಳೇ? ಅವಳು ಇಷ್ಟಪಡುವುದಾದರೆ, ಕೆಲಸವು ಸುಖವಾಗಿ ಪರಿಣಮಿಸುವುದು. "ಮಾಕು ಶ್ರಮಂ ; ಮಾಕು ದುರ್ಭೋಜನಂ" ಎಂಬಂತಾದರೆ?

ವಿನಯ— ಅದನ್ನು ನೀನೇ ನೋಡಿಕೊಳ್ಳಬೇಕು, ಅದು ನಿಮ್ಮ ನಿಮ್ಮ ಇಷ್ಟ. ಆಕೆಯನ್ನು ನಿನ್ನಲ್ಲಿಗೆ ತಂದು ಬಿಡುವುದು ನಮ್ಮ ಕೆಲಸ; ಸ್ವಾಧೀನ ಪಡಿಸಿಕ್ಕೊಳ್ಳುವುದು ನಿನ್ನ ಕೆಲಸ. ಆಸೆಯನ್ನು ತೋರಿದರೆ ಆವ ಕೆಲಸ ತಾನೇ ನಡೆಯಲಾರದು?

ನವ—ನೀನು ಹೊರಟು ಬಂದಾಗ ರಾಮದಾಸನು ಆಕೆಯನ್ನು ಸವರಿಸಿ ಕೊಂಡು ಬಂದುದನ್ನು ನೀನು ಕಣ್ಣಾರೆ ನೋಡಿದೆಯಾ?

ವಿನಯ—ನಾನು ನೋಡಿದುದರಿಂದಲೇ ನಿನಗೆ ಹೇಳುವುದು. ಸುಳ್ಳ ಹೇಳಿದುದರಿಂದ ನನಗಾಗುವುದೇನು?

ಇಷ್ಟು ಸಂಭಾಷಣೆಯು ನಡೆಯುತ್ತಿರುವಾಗಲೇ ಗಾಡಿಯು ತೋಟದ ಮುಂಗಡೆಯಲ್ಲಿ ಬಂದು ನಿಂತಿತು. ಇಬ್ಬರೂ ಗಾಡಿಯಿಂದಿಳಿದು ಮನೆಯೊಳಗೆ ಹೊರಟರು. ನಾನೂ ಧೈರ್ಯಮಾಡಿ ಮನೆಯ ವರೆಗೂ ಹೊರಟೆನು. ನಾನು ಸ್ಥಳವನ್ನು ವಿಮರ್ಶೆಮಾಡಿ ನೋಡುತ್ತಿರುವಷ್ಟರಲ್ಲಿಯೇ, ಒಂದು ಬುರಕಿ ಹಾಕಿದ್ದ ಪಾಲ್ಕಿಯು ನಿಶ್ಶಬ್ದವಾಗಿ ಮನೆಯೊಳಗೆ ಪ್ರವೇಶ ಮಾಡಿತು. ನಾನು ಮಟ್ಟಿಗೆ ಬಹಳ ಹೊತ್ತು ಮನೆಯ ಹೊರಗಡೆಯೇ ನಿಂತಿದ್ದೆನು.

---

## ಹದಿಮೂರನೆಯ ವಿಲಾಸ

ಮರುದಿನ ನಾನು ರಾಮಪುರಕ್ಕೆ ಪಯಣ ಬಳೆಯಿಸಿದೆನು. ಅಲ್ಲಿಯ ಜಮೀನ್ದಾರರಾದ ರಾಜರಾಜೇಶ್ವರ ಚಕ್ರವರ್ತಿಯವರ, ಹಾಗೂ ಅವರ ಬಂಧು ವಾದ ಮತ್ತೊಬ್ಬ ಜಮೀನ್ದಾರರ ದರುಶನವನ್ನೂ ತೆಗೆದುಕೊಂಡೆನು. ಅವರು ನನ್ನನ್ನು ಕಂಡ ಕೂಡಲೇ—ಕೆಲಸವು ಎಷ್ಟರ ಮಟ್ಟಿಗೆ ಸಾಧ್ಯವಾಗಿರುವುದು? ಎಂದು ಕೇಳಿದರು.

ನಾನು—ಎಲ್ಲವೂ ಮುಗಿದ ಹಾಗೆಯೇ.

ರಾಜರಾಜ—ತಿಳಿಸೋಣವಾಗಬಹುದಷ್ಟೆ?

ನಾನು—ತಮ್ಮ ಹಣವೆಲ್ಲವೂ ಪೂರ್ತಿಯಾಗಿ ಸಿಕ್ಕುವುದೆಂದು ಹೇಳ ಲಾರೆನು. ಮುಕ್ಕಾಲು ಪಾಲಿಗೇನೂ ಭಯವಿಲ್ಲ.

ರಾಜರಾಜ—ನನ್ನದು ಹಾಗಿರಲಿ. ನಮ್ಮ ಬಂಧುವಿನದು ಏನಾಗಿರು ವುದು?

ನಾನು—ತಾವು ಬರೆದ ಹೆಂಗುಸು ರಾಮಪುರವನ್ನು ತ್ಯಾಗಮಾಡಿ ಹೋಗಿಲ್ಲವೆಂದು ನಾನು ಊಹಿಸುವೆನು.

ಈ ಮಾತನ್ನು ಕೇಳಿ ಅವರಿಗುಂಟಾದ ಸಂಕಟವಾದರೋ, ಆಗಿನ ಕಾಲದಲ್ಲಿ ಅಂತರಿಕ್ಷದಿಂದ ಸಿಡಿಲು ಬಂದು ಬಡಿದಿದ್ದರೂ ಅಷ್ಟು ಉಂಟಾಗುತ್ತಿರಲಿಲ್ಲವೆಂದು ತೋರಿ ಬರುವಂತಿದ್ದಿತು. ರಾಜರಾಜೇಶ್ವರನು ಬಹಳ ಆಶ್ಚರ್ಯದಿಂದಲೂ, ಬಹಳ ಸಂಕಟದಿಂದಲೂ ನನ್ನನ್ನು ಕುರಿತು—ಅಯ್ಯಾ, ನಾವು ಸಮರ್ಥರಾದ ಜನಗಳನ್ನು ಬಿಟ್ಟು ರಾಮಪುರದ ಒಳಗೂ ಹೊರಗೂ ಎಲ್ಲೆಲ್ಲಿಯೂ ಕೊಂಚವೂ

ಬಿಡದ ಹಾಗೆ ಹುಡುಕಿಸಿದುದರಲ್ಲಿ ಪ್ರಯೋಜನವೇನೂ ಆಗಲಿಲ್ಲ. ತಾವು ಹೇಳು ವುದು ನೋಡಿದರೆ ನನಗೆ ಆಶ್ಚರ್ಯವೇ ಉಂಟಾಗುವುದು.

ನಾನು—(ಮುಗುಳ್ನಗೆಯನ್ನು ನಕ್ಕು) ಅಪ್ಪಣೆಯಾದರೆ ತಮ್ಮ ಬಂಧು ವಿನ ಮನೆಯನ್ನು ಒಂದು ಸಲ ನೋಡಬೇಕೆಂದು ಬಯಸುವೆನು. ಅದರಿಂದಲೂ ನನಗೊಂದು ಪ್ರಯೋಜನವಿರುವುದು.

ಶ್ರೀ ರಾಜರಾಜೇಶ್ವರ ಜಮೀನ್ದಾರರ ಬಂಧುವು ಸಂತೋಷದಿಂದ ನನ್ನನ್ನು ತನ್ನ ಮನೆಗೆ ಕರೆದುಕೊಂಡು ಹೋಗಿ ಮನೆಯೆಲ್ಲವನ್ನೂ ತೋರಿಸಿದನು. ಬಳಿಕ ಅವರ ಹಿತ್ತಲಲ್ಲಿರುವ ಕೊಳವನ್ನು ನೋಡಬೇಕೆಂದು ನಾನು ಅಪೇಕ್ಷೆಪಟ್ಟು ದರಮೇಲೆ ಆತನು ಅದನ್ನೂ ತೋರಿಸಿದನು. ಅಲ್ಲಿಂದ ನಾನು ಆತನ ಅಪ್ಪಣೆ ಯನ್ನು ತೆಗೆದುಕೊಂಡು ಹೊರ ಹೊರಟೆನು. ಆತನು ಮನೆಯೊಳಗೆ ಹೊರಟ ಕೂಡಲೇ, ನಾನೂ ಅವನ ಮನೆಗೆ ಸೇರಿದ್ದ ಒಂದು ತೋಟದ ಮೂಲಕವಾಗಿ ಗುಂಡುತೋಪಿಗೆ ಹೋಗಿ ಅಲ್ಲಿಂದ ಅವಧೂತನ ದಿಣ್ಣೆಯ ಕಡೆಗೆ ತೆರಳಿದೆನು. ಅದನ್ನು ನೋಡುತ್ತಲೇ ನನಗೆ ಭಯವಾಯಿತು. ದೂರದಲ್ಲಿ ಹಾಳು ಬಿದ್ದಿದ್ದ ಒಂದೆರಡು ಮನೆಗಳೂ ಕಾಣಿಸಿಕೊಂಡುವು. ನಾನು ಒಂಟಿಯಾಗಿ ಮುಂದಕ್ಕೆ ಹೋಗಲು ಸಾಹಸವುಳ್ಳವನಾಗದೆ, ಹಿಂದಿರುಗಿ ಪೋಲೀಸು ಠಾಣ್ಯದ ಕಡೆಗೆ ಹೊರಟೆನು.

ಅಲ್ಲಿ ಮಾಡಬೇಕಾದ ಕೆಲಸವನ್ನು ಮಾಡಿಯೂ, ಹೇಳ ಬೇಕಾದುದೆಲ್ಲ ವನ್ನೂ ಹೇಳಿಯೂ ನಾನು ಅಲ್ಲಿಂದ ಹೊರಟೆನು. ನಾನು ಪೋಲೀಸು ಠಾಣ್ಯಕ್ಕೆ ಹೋಗುವಾಗಲೇ ಒಂದು ವೇಷ. ಅಲ್ಲಿಂದ ಹಿಂತಿರುಗಿ ಹೊರಟಾಗಲೇ ಮತ್ತೊಂದು ವೇಷ; ಅಡಿಗಡಿಗೂ ನಾನು ವೇಷವನ್ನು ಬದಲಾಯಿಸಿಕೊಂಡು ಬರುತ್ತಿದ್ದರೆ ನನ್ನನ್ನು ಚೆನ್ನಾಗಿ ಬಲ್ಲವರೂ ಕೂಡ ಗುರ್ತಿಸಲಾರದವರಾಗಿದ್ದರು. ವೇಷವನ್ನು ಬದಲಾಯಿಸುವುದರಲ್ಲಿಯೂ ಬಹಳ ಬುದ್ಧಿ ಬೇಕು. ಬಟ್ಟೆಬರೆಗಳನ್ನು ಬದ ಲಾಯಿಸಿದ ಮಾತ್ರಕ್ಕೇ ನಮ್ಮ ಇಷ್ಟವು ನೆರವೇರುವುದಿಲ್ಲ. ವೇಷಕ್ಕೆ ತಕ್ಕ ರೂಪ, ರೂಪಕ್ಕೆ ತಕ್ಕ ಕೆಲಸ, ಕೆಲಸಕ್ಕೆ ತಕ್ಕ ಭಾಷೆ, ಇವೆಲ್ಲವೂ ನನ್ನಲ್ಲಿ ಪರಿ ಪೂರ್ಣವಾಗಿದ್ದುವು. ಕಾರ್ಯಸಾಧನೆಯಲ್ಲಿ ಇವೇ ನನ್ನ ಮುಖ್ಯ ಸಾಮಗ್ರಿಗಳು. ಪ್ರಕೃತದ ನನ್ನ ವೇಷವಾದರೋ ಭಿಕ್ಷುಗಾರನಿಗೆ ತಕ್ಕಂತಿದ್ದಿತು. ಒಂದು ಕೈಯಲ್ಲಿ ಭಿಕ್ಷಾ ಪಾತ್ರೆ; ಮತ್ತೊಂದು ಕೈಯಲ್ಲಿ ಜಪಮಾಲೆ; ಬಾಯಲ್ಲಿ "ಅಮ್ಮೊಂತುತ್ಕವಳಾ ಕೊಡೀ ತಾಯೆ, ಅಮ್ಮಮ್ಮ ರವಷ್ಟೆಸರಿದ್ರೆ ನೀಡೀ ತಾಯಿ" ಎಂಬ ಬಿಕಾರಿಯ ವರ್ಣಮಾಲೆಗಳು. ಇವೆಲ್ಲವೂ ಪ್ರಕೃತೋಚಿತವಾದ

ಕಾರ್ಯಸಾಧನೆಗಾಗಿ ನೆರವೇರಿಸಲ್ಪಡಬೇಕಾಯಿತು. ಹಾ, ಪಾಪಿಯಾದ ಹೊಟ್ಟೆಯೇ! ನಿನ್ನ ಸ್ವಾರ್ಥಕ್ಕಾಗಿ ಜನರನ್ನು ಆವಾವ ತೆರನಾಗಿ ಆಟವಾಡಿಸುವೆ!

---

## ಹದಿನಾಲ್ಕನೆಯ ವಿಲಾಸ

ನಾನು ಬುದ್ಧಿಯೆಲ್ಲವನ್ನೂ ವೆಚ್ಚಮಾಡಿ ಆರಾರನ್ನೋ ವಿಚಾರಿಸಿ ರಾಮದಾಸನ ವಾಸಸ್ಥಾನವನ್ನು ಪತ್ತೇಮಾಡಿಕೊಂಡೆನು. ಭಿಕ್ಷುಗಾರನು ಹೋಗದ ಸ್ಥಳವಾವುದು? ಭಿಕ್ಷುಗಾರನು ಮಾತನಾಡಿಸದ ಮನುಷ್ಯನಾವನು? ಭಿಕ್ಷುಗಾರನಿಗೆ ಬಡಬಗ್ಗರೆಂಬುದಿಲ್ಲ; ಹಣಗಾರನೆಂಬುದಿಲ್ಲ; ಹೊತ್ತಿಲ್ಲ, ಗೊತ್ತಿಲ್ಲ; ಭಿಕ್ಷುಕನು ಮನಬಂದ ಕಡೆಗೆಲ್ಲಾ ಹೋಗುವನು. ಪ್ರಕೃತದಲ್ಲಿ ನನ್ನ ಸ್ಥಿತಿಯೂ ಹಾಗೆಯೇ ಇದ್ದಿತು.

ರಾಮದಾಸನು ಜಾತಿಯಲ್ಲಿ ನಾಪಿತನು. ವೃತ್ತಿಯಲ್ಲಿ ಮಟ್ಟಿಗೆ ಅದು ಕಂಡುಬರುತ್ತಿರಲಿಲ್ಲ. ಅವನು ಬೇರೆಯ ವೃತ್ತಿಯಿಂದ ಜೀವಿಸುತ್ತಿದ್ದುದರಿಂದ, ತನ್ನ ಜಾತಿಯ ಕಸಬನ್ನು ಅವನು ನಿಶ್ಶೇಷವಾಗಿ ಮರೆತು ಬಿಟ್ಟಿದ್ದನು. ಈಗಣ ಕಾಲದ ನಿಯಮವೇ ಹೀಗೆ. ಜಾತಿಯಲ್ಲಿ ಕಟ್ಟಿಲ್ಲ; ಕಸಬು ದಾರಿಯಲ್ಲಿ ವಿಂಗಡವಿಲ್ಲ; ಹೊಟ್ಟೆಗಾಗಿ ಜನಗಳು ಶ್ರಮಪಡುವುದು ನೋಡಿದರೆ ತುದಿಮೊದಲಿಲ್ಲ.

ನಾನು ಭಿಕ್ಷುಗಾರನ ವರ್ಣಮಾಲೆಯನ್ನುಚ್ಚರಿಸುತ್ತಾ ಬೀದಿ ಬೀದಿಗಳಲ್ಲಿ ಹೊರಟೆನು. ಒಂದು ಬೀದಿಯಲ್ಲಿ ರಾಮದಾಸನೂ ತನ್ನ ಮನೆಯ ತಲೆವಾಗಿಲಿನಲ್ಲಿ ಕುಳಿತು ವೀಳಯವನ್ನು ಅಗಿಯುತ್ತಿದ್ದನು. ಆತನ ಸುತ್ತಲೂ ನಾಲ್ಕಾರು ಜನ ಅಣ್ಣಾವಂಟಿಗಾರರು ಕುಳಿತುಕೊಂಡು ಆವಾವುದನ್ನೋ ಮಾತನಾಡುತ್ತಿದ್ದರು. ಆಗಿಂದಾಗ ಕೇಕೇ ಹಾಕಿಕೊಂಡು ನಗುತ್ತಲೂ ಇದ್ದರು.

ವಾಚಕ ಮಹಾಶಯರೇ! ಆಮಹಾ ಪುರುಷರನ್ನು ಕೊಂಚ ಮಟ್ಟಿಗಾದರೂ ವರ್ಣಿಸಬೇಕು; ಇಲ್ಲದಿದ್ದರೆ ಅವರ ಸ್ವಭಾವವು ಇತರರಿಗೆ ತಿಳಿಯುವುದು ಕಷ್ಟವಾಗುವುದು. ಗ್ರಂಥಕಾರರು ಕೈಯಲ್ಲಿ ಲೇಖಣಿಯನ್ನು ಹಿಡಿದ ಮೇಲೆ ಆವುದನ್ನಾದರೂ ವರ್ಣಿಸಲೇ ಬೇಕು. ಒಳ್ಳೆಯದು, ಕೆಟ್ಟುದು ಎಂದು ಭೇದವೆಣಿಸುವುದಾದರೆ ಗ್ರಂಥವು ಮುಂದೆ ಸಾಗುವುದೆಂತು? ಆದರೆ ಮಹಾಪುರುಷರ ಗುಣಗಳನ್ನು ವರ್ಣಿಸಬೇಕೆಂದೆಣಿಸಿರುವ ನಮಗೆ ನೀಚರನ್ನು ವರ್ಣಿಸುವುದರಲ್ಲಿ ಕೊಂಚ ಮಟ್ಟಿಗೆ ಮನವು ಹಿಂಜರಿಯುವುದು; ಆದರೂ ಯತ್ನವಿಲ್ಲ. ಕುಣಿಯುವುದಕ್ಕೆ ಬಂದ ಮೇಲೆ ನಾಚುಗೆ ಪಟ್ಟರಾದೀತೇ? ಹೇಗೋ ಹಾಗೆ ಒಂದೆರಡು

ಮಾತುಗಳಲ್ಲಿ ನಮ್ಮ ಉದ್ದೇಶವನ್ನು ತೀರಿಸಿಕೊಂಡು ಬಿಡುವೆವು. ನಾವು ಉದಾಸೀನ ಮಾಡಿದೆವೆಂದು ತಾವೂ ಉದಾಸೀನ ಮಾಡಲಾಗದು.

ರಾಮದಾಸನ ಅಕ್ಕಪಕ್ಕಗಳಲ್ಲಿ ಕುಳಿತಿದ್ದ ನಾಲ್ಕಾರು ಜನಗಳು ಮನುಷ್ಯರೆಂದು ನನಗೆ ಬೋಧೆಯಾಗಲಿಲ್ಲ. ಬಲು ತೆರನಾಗಿ ಯಮಧರ್ಮರಾಯನು ಆವುದೋ ಕೆಲಸಕ್ಕೆಂದು ತನ್ನ ಕಿಂಕರರಲ್ಲಿ ನಾಲ್ಕಾರು ಜನರನ್ನಾರಿಸಿ ಆಗ ತಾನೇ ಭೂಲೋಕಕ್ಕೆ ಕಳುಹಿಸಿ ಕೊಟ್ಟಿದ್ದಂತೆ ನೋಟಕರಿಗೆ ತಿಳಿದುಬರುತ್ತಿದ್ದಿತು. ಅವರ ಗುಣಗಳ ವರ್ಣನೆಗಾಗಿ ನಮ್ಮ ಈ ಚಿಕ್ಕದಾದ ಗ್ರಂಥದಲ್ಲಿ ಇಷ್ಟರ ಮಟ್ಟಿಗೆ ಸ್ಥಳವನ್ನು ಕೊಟ್ಟರೆ ಸಾಕಾಗಿರುವುದು. ಇದರಿಂದಲೇ ಬುದ್ಧಿವಂತರಾದವರು ಅವರ ಗುಣಗಳನ್ನರಿವರು. ಇವರುಗಳನ್ನು ನೋಡಿದವರಿಗೆ ರಾಮದಾಸನೇ ಎಷ್ಟೋ ಸಾಧುವು ; ಎಷ್ಟೋ ದಯಾಳುವು ; ಎಷ್ಟೋ ಸುಂದರನು ; ಎಷ್ಟೋ ಧಾರ್ಮಿಕನು. ಬಲು ಮಾತಿನಿಂದೇನು ? ಎಲ್ಲಾ ವಿಷಯದಲ್ಲಿಯೂ ಎಷ್ಟೋ ವಾಸಿಯೆಂದು ಗೊತ್ತಾಗುತ್ತಿದ್ದಿತು.

ನಾನು ಅವರು ಇದ್ದಲ್ಲಿಗೆ ಹೋಗಿ, "ಅಮ್ಮೋಂತುತ್ಕವಳಾ ಕೊಡೀ ತಾಯೆ," ಎಂದು ಭಿಕ್ಷೆಯನ್ನು ಬೇಡಿದೆನು. ರಾಮದಾಸನು ನನ್ನನ್ನು ನೋಡಿ ಅಸಹ್ಯಪಟ್ಟು—ಹೆಣವೇ ! ನನ್ನಲ್ಲೇನಿದೆ ? ಹೋಗು, ಹೋಗು. ನಿನಗೇನಾದರೂ ಬೇಕಾಗಿದ್ದರೆ ದೊಡ್ಡ ದೊಡ್ಡವರ ಮನೆಯ ಬಾಗಿಲಿಗೆ ಹೋಗಿ ಅರಚಿಕೊಳ್ಳು ; ಇಲ್ಲಿಂದ ಬೇಗನೆ ತೊಲಗಿ ಹೋಗು, ಎಂದು ಅಬ್ಬರಿಸಿದನು.

ನನಗೆ ಅಲ್ಲಿಂದ ತೊಲಗಿ ಹೋಗಲು ಇಷ್ಟವಿರಲಿಲ್ಲ. ಅವರವರು ಸೇರಿಕೊಂಡು ಏನು ಮಾತನಾಡುತ್ತಾರೆಂಬುದನ್ನು ತಿಳಿಯಬೇಕೆಂಬಾಸೆ ನನ್ನನ್ನು ದೂರವಾಗಿ ತೊಲಗಿಸದೇ ಹೋಯಿತು. ಅದಕ್ಕಾಗಿಯೇ ನಾನು ಅವರು ಬೈದರೂ ಬೈಸಿಕೊಂಡು, ಹೊಡೆದರೂ ಹೊಡೆಯಿಸಿಕೊಂಡು ಅಲ್ಲಿಯೇ ಇದ್ದು ಸಂಗತಿಗಳನ್ನು ತಿಳಿಯಬೇಕೆಂದು ನಿಶ್ಚಯಮಾಡಿ—ಬುದ್ಧೀ ! ತಾವೇ ಹೀಗೆ ಹೇಳಿದರೆ ಹೇಗೆ ? ದೊಡ್ಡವರು ಏನ ಕೊಟ್ಟಾರು ? ಅವರ ಮನೇ ಬಾಗಿಲಿಗೆ ಹೊಗುವುದಕ್ಕುಂಟೇ ? ಭಿಕ್ಷುಕರೆಂದರೆ ಅವರಿಗೆ ಜನ್ಮದ್ವೇಷ. ಬಾಗಿಲಿಗೆ ಹೋದ ಕೂಡಲೇ ಯಮ ಕಿಂಕರರಂತಿರುವ ಅವರ ಸೇವಕರೇ ನಮಗೆ ಅರ್ಧಚಂದ್ರ ಪ್ರಯೋಗವನ್ನು ಮಾಡಿ ದೂರ ತಳ್ಳಿಬಿಡುವರು. ಕೆಲವೆಡೆಗಳಲ್ಲಿ ಸೇವಕರ ಜತೆಗೆ ನಾಯಿಗಳ ವೇಧೆ ಬೇರೆ. ಹೀಗಿರುವಲ್ಲಿ ಬಡವರಿಗೆ ಭಾಗ್ಯವಂತರು ಉಪಕಾರ ಮಾಡುವುದೆಂದರೇನು ? ಬುದ್ಧೀ ! ಬಡವರೇ ಕೊಡಬೇಕು ; ಬಡವರೇ ಬದುಕ ಬೇಕು. ತಾವು ನನ್ನ ಮೇಲೆ ಕೋಪಿಸಿಕೊಳ್ಳಕೂಡದು. ನಾನು ನಿಜವಾಗಿಯೂ ಬೆಳಗಿನಿಂದ ಹೊಟ್ಟೆಗಿಲ್ಲದೆ ಸಾಯುತ್ತಿರುವೆನು. ನಾಯಿಗೆ ಹಾಕುವಷ್ಟು ತುತ್ತಾದರೂ ಇದ್ದರೆ ನನಗೆ

ಸಾಕು. ನನಗೆ ದುರಾಸೆಯಿಲ್ಲ. ಈ ಹಾಳ ಹೊಟ್ಟೆಗಾಗಿ ಇಷ್ಟು ಸಂಕಟಪಡು ವೆನು. ಹಳಸಿದುದೋ, ಕೊಳೆತುದುದೋ, ಆವುದಾದರೂ ಸರಿ. ನನಗೆ ಹಾಕು ವುದು ತಾವು ತಿಂದು ಚೆಲ್ಲುವಷ್ಟಲ್ಲ.

ರಾಮದಾಸ—ಏನು? ನೀನು ಕಲಿತ ಮಾತನ್ನೆಲ್ಲಾ ಹರಟುವೆ. ನೀನು ಉಪವಾಸವಿದ್ದರೇನು? ಸತ್ತರೇನು? ಹೋಗೆಂದರೆ ಹೋಗಬೇಕು. ಬಿಕಾರಿಗೆ ಎಷ್ಟು ತಲೆಹರಟೆ?

ನಾನು—(ದೈನ್ಯದಿಂದ) ಸ್ವಾಮಿ, ನಾನು ಮುದುಕ; ಹೊಟ್ಟೆಗಿಲ್ಲ ವೆಂದು ಕೇಳುತ್ತೇನೆಯೇ ಹೊರತು ತಮ್ಮ ಆಸ್ತಿಯಲ್ಲಿ ಭಾಗವನ್ನು ಬೇಡಲು ಬಂದವನಲ್ಲ. ಒಂದು ತುತ್ತು! ಒಂದೇ ತುತ್ತು! ಅದಕ್ಕಾಗಿ ನಾನು ಯಾವ ಜ್ಜೀವವು ನಿಮಗೆ ಬಾಧ್ಯಪಟ್ಟಿರುವೆನು, ಸುಮ್ಮನೆಯೇ ಆರನ್ನೂ ಧಿಕ್ಕರಿಸ ಬಾರದು. ಕಾಲಾನುಕಾಲದಲ್ಲಿ ಎಲ್ಲರಿಂದಲೂ ಪ್ರಯೋಜನವುಂಟು. ಅದ ರಲ್ಲಿಯೂ ಅನ್ನ ಹಾಕಿದ ದಣಿಗೆ ನನ್ನಿಂದ ಪ್ರಯೋಜನವಿಲ್ಲವೆಂದರೇನು? ಬಲ್ಲ ವರು ಕಸದಿಂದ ರಸವನ್ನು ತೆಗೆವರು. ಹೀಗಿರುವಲ್ಲಿ ಮನುಷ್ಯಮಾತ್ರದವನಿಂದ ಪ್ರಯೋಜನವಿಲ್ಲವೇ? ಇದರ ಮೇಲೂ ನನ್ನಲ್ಲಿ ಬಹಳ ವಿದ್ಯೆಗಳುಂಟು. ಅದೃ ಷ್ಟಕ್ಕೆ ಮಟ್ಟಿಗೆ ನನ್ನಲ್ಲಿ ದಾರಿದ್ರ್ಯವೇ ಹೊರತು ಮತ್ತಾವುದಕ್ಕೂ ಇಲ್ಲ. ತಾವು ದಯೆಯಿಟ್ಟು ಕೇಳುವುದಾದರೆ, ನಾನು ಮಾಡಿರುವ ಕೆಲಸಗಳಲ್ಲಿ ಒಂದೆರಡನ್ನು ತಿಳಿಸುವೆನು. ನನ್ನಿಂದ ತಮಗೇನಾದರೂ ಪ್ರಯೋಜನ ಕಂಡುಬರುವುದಾದರೆ, ನನ್ನನ್ನು ಉಪಯೋಗಿಸಿಕೊಳ್ಳಬಹುದು. ನಾನು ಆವುದಕ್ಕೂ ಸಿದ್ಧನಾಗಿರುವೆನು.

ರಾಮದಾಸ—(ಕೊಂಚ ಹೊತ್ತು ಚಿಂತಿಸಿ) ನೀನು ಅದೇನೇನ ಮಾಡಿ ರುವ್ಯೆ? ಹೇಳು. ಅನಂತರ ನಿನ್ನಿಂದ ನನಿಗೆ ಎಷ್ಟರಮಟ್ಟಿನ ಪ್ರಯೋಜನವಿದೆ ಯೆಂಬುದನ್ನು ತಿಳಿಸುವೆನು.

ನನ್ನ ಮನೋರಥವು ನೆರವೇರಿತು. ಆತನ ನಾಶಕ್ಕೆ ಮೂಲ ಭೂತವಾದ ಬೀಜವು ಆತನಲ್ಲಿಯೇ ನಡಲ್ಪಟ್ಟಿತು. ರಾಮದಾಸನು ನನಗೆ ಒಂದು ಚೂರು ಅಡಕೆಯನ್ನೂ, ಒಂದು ತರಗೆಲೆಯನ್ನೂ ಕೊಟ್ಟನು. ನಾನು ಅದನ್ನು ಅಗಿ ಯುತ್ತಾ ಅವನ ಮುಖೋಲ್ಲಾಸಕ್ಕಾಗಿ ಹೇಳತೊಡಗಿದೆನು :—

ಸ್ವಾಮಿ, ಬುದ್ಧೀ, ತಾವು ದೊಡ್ಡವರು. ಮನಸ್ಸಿಗೆ ಬೇಸರ ಪಡಕೂಡದು. ನನ್ನ ಯೋಗ್ಯತೆಗೆ ತಕ್ಕಹಾಗೆ ನಾನು ಅನೇಕ ನೀಚ ಕಾರ್ಯಗಳಲ್ಲಿ ತಲೆಹಾಕಿ ಜನರಿಗೆ ಉಪಕಾರ ಮಾಡಿರುವೆನು. ತಮಗೆ ಅದು ಇಷ್ಟವೋ, ಇಲ್ಲವೋ, ಗೊತ್ತಾ ದರೆ ಮುಂದೆ ನನ. ಮಾತು ಹೊರಡುವುದು.

ರಾಮುದಾಸ—ನೀನು ಏನೇನ ಮಾಡಿರುವೆಯೋ, ಬಗುಳು. ದೊಡ್ಡ ದೊಡ್ಡ ಕೆಲಸಗಳನ್ನು ಮಾಡುವುದಕ್ಕೆ ನಿನಗೆ ದೊಡ್ಡತನವೇನು ಕೊಳ್ಳೇ ಹೋಗುವುದು ?

ನಾನು—ಹಾಗಾದರೆ ಕೇಳೋಣವಾಗಲಿ. ಬುದ್ಧೀ, ಎಂಥೆಂಥವರ ಮನೆಯ ಹೆಂಗುಸರನ್ನೂ ಅಪೇಕ್ಷಿಸಿದವರಿಗೆ ಒಂದೆರಡು ಗಂಟೆಗಳೊಳಗಾಗಿಯೇ ಹವಣಿಸಿ ಕೊಟ್ಟಿರುವೆನು. ಕಳ್ಳರ ಜತೆಯಲ್ಲಿ ಕಳ್ಳತನಕ್ಕೆ ನುಗ್ಗಿರುವೆನು. ಸುಳ್ಳು ಸಾಕ್ಷಿ ಹೇಳಿ ಎಷ್ಟೋ ಜನರನ್ನು ಉದ್ಧಾರ ಮಾಡಿರುವೆನು. ಇತರರ ಕಾರ್ಯಸಾಧನೆಗಾಗಿ ಕೊಲೆಯನ್ನೂ ಮಾಡಿರುವೆನು. ಬಲು ಮಾತಿನಿಂದೇನು? ಆರಾರಿಗೆ ಏನೇನಾಗಬೇಕೋ ಅದೆಲ್ಲವನ್ನೂ ಬಹಳ ಬುದ್ಧಿಯಿಂದ ನೆರವೇರಿಸಿ ಕೊಟ್ಟಿರುವೆನು. ಇಷ್ಟಾದರೂ ನನ್ನ ದಾರಿದ್ರ್ಯ ಬೇರೆ ತಪ್ಪಲಿಲ್ಲ. ಮೇಲ್ಕಂಡವುಗಳಲ್ಲಿ ಆವುದನ್ನೂ ಎಂದಿಗೂ ನನ್ನ ಸ್ವಾರ್ಥಕ್ಕಾಗಿ ಮಾಡಿದವನಲ್ಲವಾದುದರಿಂದಲೇ ನನಗೆ ನಿತ್ಯ ದಾರಿದ್ರ್ಯವು ಕಾಲ ಹಾಕಿಕೊಂಡಿತು. ಇಲ್ಲದಿದ್ದರೆ ಒಂದು ತುತ್ತಿಗೆ ನಿಮ್ಮಲ್ಲಿಗೆ ಬಂದು ಗೋಗರಿಯ ಬೇಕಾಗಿದ್ದಿತೇ? ನನ್ನಲ್ಲಿರುವ ಗುಣವೇನೆಂದರೆ—ನಾನು ಆವ ಕೆಲಸ ಮಾಡಿದರೂ ಹರಿಹರ ಬ್ರಹ್ಮಾದಿಗಳಿಗೂ ಗೋಚರವಾಗುತ್ತಿರಲಿಲ್ಲ. ಅದಕ್ಕಾಗಿಯೇ ಎಷ್ಟೋ ಜನರು ನನ್ನ ಸಾಹಾಯ್ಯವನ್ನು ಬಯಸಿ ಬೇಕಾದಷ್ಟು ಕೆಲಸಗಳನ್ನು ಮಾಡಿಸಿಕೊಂಡಿರುವರು. ಇವೇ ಆದಿಯಾದ ಕೆಲಸಗಳನ್ನೇ ನಾನು ಮಾಡಿರುವುದು. ನಾನು ಹೇಳುವ ಮಾತಿಗೆ ತಾವು ಕೋಪಿಸಿಕೊಳ್ಳಕೂಡದು. ನನ್ನಿಂದ ತಮಗೇನಾಗಬೇಕಾದರೂ ಸಂಕೋಚವಿಲ್ಲದೆಯೇ ತಿಳಿಸೋಣವಾಗಲಿ. ನಾನು ಕೆಲಸವನ್ನು ಸಾಧಿಸಿಕೊಟ್ಟ ಮೇಲೆ, ನನ್ನ ಶಕ್ತಿಯನ್ನಾದರೂ ನೋಡಿರಿ. ಮೊದ ಮೊದಲು ನಾನು ಹೇಳುವುದು ನೋಡಿದರೆ ನಿಮಗೆ ನಂಬುಗೆಯುಂಟಾಗಲಾರದು.

ನನ್ನ ಮಾತನ್ನು ಕೇಳಿ ರಾಮುದಾಸನಿಗೆ ತಲೆದಿರುಗಿತು. ಅವನು ಮೂಗಿನ ಮೇಲೆ ಬೆರಳಿಟ್ಟುಕೊಂಡು ನನ್ನನ್ನು ತನ್ನ ಪಕ್ಕದಲ್ಲಿಯೇ ಕುಳ್ಳಿರಿಸಿ—ಅಯ್ಯಾ, ನೀನು ವಾಸವಾಗಿರುವುದೆಲ್ಲಿ? ಎಂದನು.

ನಾನು ತುಂಬಾ ಹೆದರಿದವನಂತೆ ನಟಿಸಿ—ಅದೇಕೆ, ಬುದ್ಧಿ, ನನ್ನ ಸ್ಥಳವನ್ನು ಕೇಳುವಿರಿ? ತಮ್ಮ ಮಾತ ಕೇಳಿದರೆ ನನಗೆ ಭಯವಾಗುವುದು. ನನ್ನನ್ನು ಪೋಲೀಸು ಗೀಲೀಸಿಗೆ ಕೊಡಬೇಕೆಂದಿರುವರೋ, ಹೇಗೆ? ಹಾಗಾದರೆ ನಾನು ಮಾತನಾಡಿದುದು ತಪ್ಪಾಯಿತು. ನಾನು ಹೊರಡುವೆನು. ದಯೆಯಿಟ್ಟು ಈ ಸಲಕ್ಕೆ ನನ್ನನ್ನು ಮನ್ನಿಸಿರಿ, ಎಂದು ಕೇಳಿಕೊಂಡೆನು.

ರಾಮದಾಸನು ಅವನ ಸ್ನೇಹಿತರ ಮುಖಗಳನ್ನು ನೋಡಿ—ಈ ಮುದುಕನು ಯೋಗ್ಯನಾಗಿ ಕಾಣಿಸಿಕೊಳ್ಳುವನು. ಈತನು ಕೈಕೊಂಡ ಕೆಲಸವನ್ನು ಚೆನ್ನಾಗಿಯೂ ನೆರವೇರಿಸಬಲ್ಲವನಾಗಿ ತೋರಿಕೊಳ್ಳುವನು. ಈತನ ಒತ್ತಾಸೆಯು ನಮಗಿರಬೇಕಲ್ಲವೇ? ಇಂಥವರಿಂದ ನಾವು ಬಹಳ ಕೆಲಸಗಳನ್ನು ಮಾಡಿಸಿಕೊಳ್ಳಬಹುದು. ಇದರಲ್ಲಿ ನಿಮ್ಮ ಅಭಿಪ್ರಾಯನೇನು? ಎಂದು ಕೇಳಲಾಗಿ, ಅವರು—ತಾವು ಹೇಳುವುದು ನಿಜ. ಇವನನ್ನು ನೋಡಿದರೆ, ಈತನನ್ನು ನಂಬಿ ಕೆಲಸ ಮಾಡಬಹುದೆಂದು ನಮಗೂ ತೋರುವುದು. ಈತನ ಸ್ನೇಹವೂ, ಸಾಹಾಯ್ಯವೂ, ನಮ್ಮಂಥವರಿಗಿರಲೇ ಬೇಕು, ಎಂದು ಎಲ್ಲರೂ ಉತ್ತರನಿತ್ತರು.

ಇದಾದ ಮೇಲೆ ರಾಮದಾಸನು—ಎಲೈ ಸ್ನೇಹಿತನೇ, ಈಗ ಊಟದ ಸಮಯವಾದರೋ ಮೀರಿ ಹೋಗಿದೆ; ಅಡುಗೆಯಾದ ಕೂಡಲೇ, ಎಲ್ಲರೂ ಸೇರಿಕೊಂಡು ಊಟಮಾಡೋಣ. ಅಲ್ಲಿಯ ವರೆಗೂ ನೀನು ಏನಾದರೂ ತಿಂದಿರು, ಎಂದು ಹೇಳಿ, ಬಾಳೇ ಹಣ್ಣು, ಸಕ್ಕರೆ, ತುಪ್ಪ ಮೊದಲಾದುವನ್ನು ತರಿಸಿ ಕೊಟ್ಟನು. ನಾನು ಅವನ್ನು ಬಕಬಕನೆ ತಿಂದು ತೇಗಿದೆನು.

ನಾನು ತಿಂಡಿಯನ್ನು ತಿಂದು ಮತ್ತೆ ಅವರ ಜತೆಗೆ ಸಿದ್ಧನಾಗಲು, ರಾಮದಾಸನು ಮೆಲ್ಲ ಮೆಲ್ಲನೆ ನನ್ನನ್ನು ಕುರಿತು—ಅಯ್ಯಾ, ಈಗ ನಿನ್ನಿಂದ ನಮಗೆ ಒಂದೆರಡು ಮಹತ್ತರವಾದ ಕೆಲಸಗಳಾಗಬೇಕು. ಅದಕ್ಕಾಗಿ ನಾವೂ ಸರಿಯಾದ ವ್ಯಕ್ತಿಯನ್ನು ಹುಡುಕುತ್ತಿದ್ದೆವು. ದೈವಯೋಗದಿಂದ ನೀನೂ ಬಂದು ಸೇರಿದೆ. ನೀನು ಆ ಕೆಲಸಗಳನ್ನು ಕೈಕೊಳ್ಳ ಬಲ್ಲೆಯಾ? ಎಂದು ಕೇಳಲಾಗಿ, ನಾನು ಬಹಳ ಸಂತೋಷಪಟ್ಟುಕೊಂಡು ಮತ್ತೆ ಹೇಳ ತೊಡಗಿದೆನು :—

ಅಯ್ಯಾ, ಮಿತ್ರನೇ, ನಾನು ಆವ ಕೆಲಸವನ್ನಾದರೂ ಮಾಡಬಲ್ಲೆನು. ನೀವು ನನ್ನನ್ನು ಪರೀಕ್ಷೆಗಾಗಿ ಕೇಳುವಿರೋ, ಇಲ್ಲವೇ, ಮತ್ತಾವುದಕ್ಕಾಗಿ ಕೇಳುವಿರೋ, ನನಗೆ ಗೊತ್ತಾಗುವುದಿಲ್ಲ. ನನ್ನನ್ನು ಮಟ್ಟಿಗೆ ತೊಂದರೆಗೆ ಸಿಲುಕಿಸ ಬೇಡಿರಿ. ಹಿಂದೊಂದು ದಿನ ಹೀಗೆಯೇ ಆಯಿತು. ದೊಡ್ಡ ಮನುಷ್ಯರೊಬ್ಬರು ಕೃತ್ರಿಮವಾದ ನೋಟುಗಳನ್ನು ಮಾಡಿಕೊಡೆಂದು ನನಗೆ ಅಪ್ಪಣೆ ಮಾಡಿದ್ದರು. ನಾನು ಸಾವಿರಾರು ರೂಪಾಯಿಗಳ ನೋಟುಗಳನ್ನು ಮಾಡುತ್ತಿರುವಾಗ, ಅವರು ನನ್ನನ್ನು ಪೋಲೀಸಿಗೆ ಹಿಡಿದು ಕೊಡುವುದರಲ್ಲಿದ್ದರು. ನಾನು ಬುದ್ಧಿಯೆಲ್ಲವನ್ನೂ ವೆಚ್ಚಮಾಡಿ, ತಪ್ಪಿಸಿಕೊಂಡ ಬಗೆಯನ್ನು ಈಗ ಸ್ಮರಿಸಿಕೊಂಡರೆ, ನನ್ನ ಮೈಯೆಲ್ಲವೂ ಝುಗ್ಗೆನ್ನುವುದು. ಹೊಟ್ಟೆಗಾಗಿ, ಈ ಹಾಳ ಹೊಟ್ಟೆಗಾಗಿ, ನಾನು ಮಾಡುವೆನು. ನೀವು ಮಟ್ಟಿಗೆ ಹೊಟ್ಟೆಯ ಮೇಲೆ ಹೊಡೆಯಬೇಡಿರಿ, ಕಂಡಿರಾ?

ರಾಮದಾಸನು ನನ್ನ ಮಾತುಗಳನ್ನು ಕೇಳಿ, ಚಮತ್ಕೃತನಾಗಿ ನನ್ನ ಕೈಗಳನ್ನು ಹಿಡಿದುಕೊಂಡು,—ಅಯ್ಯಾ, ನನ್ನ ಪರಮ ಮಿತ್ರನೇ, ನಿನ್ನ ತಲೆಯಲ್ಲಿ ಏನು ಬುದ್ಧಿ ಇರುವುದು ! ನೀನು ನೋಟುಮಾಡುವಿಯಾದರೆ, ನಿನಗೆ ದಾರಿದ್ರ್ಯವೆಲ್ಲಿಯದು ? ನೋಟುಗಳನ್ನು ಮಾಡತಕ್ಕವನು ಭಿಕ್ಷೆ ಬೇಡುವುದೆನ್ನುವುದು ಏನು ಚೆನ್ನಾಗಿದೆ ? ಇನ್ನು ಮೇಲಾದರೂ ನೀನು ಭಿಕ್ಷೆ ಬೇಡುವುದನ್ನು ಬಿಡು. ನಾವಿಬ್ಬರೂ ಅಣ್ಣತಮ್ಮಂದಿರಂತಿರೋಣ. ನಿನ್ನನ್ನು ನಾನು ಬಂಗಾರದ ಸಿಂಹಾಸನದ ಮೇಲೆ ಕುಳ್ಳಿರಿಸುವೆನು. ಅವುದಕ್ಕೂ ನೀನು ಹೆದರತಕ್ಕ ಕೆಲಸವಿಲ್ಲ, ಎಂದು ಅಭಯವಿತ್ತನು.

ನಾನು ಪರಿಪರಿಯಾಗಿ ಚಿಂತಿಸುವನಂತೆ ಕಾಣಿಸಿಕೊಂಡುದನ್ನು ನೋಡಿ, ರಾಮದಾಸನು—ಅದೇನು ಚಿಂತಿಸುವೆ ? ಹೇಳು, ಭಯಪಡಬೇಡ, ಎಂದನು.

ನಾನು—ಭಯವೇತಕೆ ? ಆದರೂ ಪ್ರಕೃತದಲ್ಲಿ ನನಗೇನೋ ಭಯವು ಕಂಡು ಬರುತ್ತಿದೆ. ಅದರ ಕಾರಣವನ್ನು ನಿಮ್ಮ ಮುಂದೆ ಹೇಳುವುದಕ್ಕೆ ನನಗೆ ಭಯವಾದರೂ ಏನು ? ನಾನು ಬೀದಿ ಬೀದಿಗಳಲ್ಲಿ ಭಿಕ್ಷೆ ಬೇಡಿಕೊಂಡು ಬರುತ್ತಿರುವಲ್ಲಿ ಜನರು ಆಡಿಕೊಳ್ಳುತ್ತಿದ್ದ ಮಾತನ್ನು ನಾನು ಕೇಳಿದೆನು. ರಾಧೆಯು ಕುಲಚ್ಯುತೆ ಯಾದುದು ಸರಿಯಷ್ಟೆ ? ಆಕೆಯ ತಂದೆಯು ಅವುದೋ ದೇಶಕ್ಕೆ ಕಾಗದ ಬರೆದು ಒಬ್ಬ ಪ್ರಸಿದ್ಧನಾದ ಪತ್ತೇದಾರನನ್ನು ಬರಮಾಡಿಕೊಂಡಿರುವನಂತೆ. ಆತನು ಇಲ್ಲಿಗೆ ಬಂದು ವಿಚಾರಮಾಡಿದುದರಲ್ಲಿ, ಜನಗಳು ನನ್ನನ್ನೇ ಅದಕ್ಕೆ ಕಾರಣವೆಂದು ತಿಳಿಸಿರುವರಂತೆ. ಈಗ ನನ್ನನ್ನು ಹೇಗಾದರೂ ಮಾಡಿ ಹಿಡಿಯಬೇಕೆಂದಿರುವರಂತೆ. ಈ ಗಾಳಿಯ ವರ್ತಮಾನವನ್ನು ಕೇಳಿದಾಗಿನಿಂದಲೂ ನನಗೆ ಹೆದರಿಕೆಯಾಗಿದೆ. ಇದೂ ಅಲ್ಲದೆ ನನ್ನ ಜತೆಗೆ ಆರೋ ರಾಮದಾಸರಂತೆ. ಅವರ ಹೆಸರನ್ನೂ ಕೆಲವರು ಹೇಳಿರುವರು.

ರಾಮದಾಸ—ಪತ್ತೇದಾರನ ವಿಷಯಗಾಗಿ ಜನರು ಏನ ಹೇಳಿಕೊಳ್ಳುತ್ತಿರುವರು ? ಅವನಿಗೆ ಬಹುಮಾನವೇನ ಕೊಡುವುದಾಗಿ ನಿಶ್ಚಯವಾಗಿರುವುದು ?

ನಾನು—ಅವನು ಬಲು ಗಟ್ಟಿಗನಂತೆ. ಅವನಿಗೆ ಮೊದಲಲ್ಲಿ ಒಂದು ಸಾವಿರ ರೂಪಾಯಿಗಳು ಕೊಡುವುದಲ್ಲದೆ, ಕೆಲಸವಾದ ಕೂಡಲೇ ಮತ್ತೊಂದು ಸಾವಿರ ರೂಪಾಯಿಗಳ ಬಹುಮಾನವಂತೆ. ಜನರು ಹೇಳುವುದರಲ್ಲಿ ನಿಜವಿರುವುದಾದರೆ ನನ್ನ ಗತಿಯೇನು ? " ಎಲ್ಲಿ ಹುಲಿಕಾಟವೋ, ಅಲ್ಲಿಯೇ ಸಂಜೆಯಾಯಿತು," ಎಂಬ ಸಾಮತಿಗೆ ನನ್ನ ಬಾಳು ಸರಿಹೋಯಿತು. ನಾನು ಮತ್ತೆಲ್ಲಿಗೆ ಹೋಗಿ ತಲೆಯನ್ನು ತಪ್ಪಿಸಿಕೊಂಡಿರಬೇಕೋ ತಿಳಿಯದು.

ರಾಮದಾಸ—ಅಯ್ಯೋ ಮಿತ್ರನೇ, ನಾನೇ ಆ ರಾಮದಾಸನೆಂಬುವನು. ಹಾಳ ಜನರ ಬಾಯಿ ಸುಮ್ಮನಿರುವುದಿಲ್ಲ. ಇನ್ನೇನು ಗತಿ? ಕೆಲಸವು ತೊಂದರೆ ಗಿಟ್ಟಿತಲ್ಲಾ? ಉಪಾಯವೇನಾದರೂ ಇದ್ದರೆ ಹೇಳು.

ನಾನು—ಆಕೆಯನ್ನು ಬೇರೆಯ ಸ್ಥಳದಲ್ಲಿಡಿಸಿದರಾಯಿತು. ಅದೇನು ಮಹಾ ವಿಷಯ? ಅವಧೂತನ ದಿಣ್ಣೆಯಲ್ಲಿ ಅವಳಿರುವಳೆಂದು ಎಲ್ಲರಿಗೂ ಸಂಶಯ ವಿರುವುದು. ಅವಳನ್ನು ಅಲ್ಲಿಂದ ಎತ್ತಿದರಾಯಿತು. ಆಮೇಲೆ, ಆ ಬೊಡ್ಡಿಯ ಮಗನು ಏನ ಮಾಡುವನೋ, ನೋಡುವೆನು.

ಇಷ್ಟು ಸಲಹೆಗಾಗಿಯೇ ರಾಮದಾಸನು ನನ್ನನ್ನು ಪರಮ ಹಿತೈಷಿಯೆಂದು ನಂಬಿ—ಮಿತ್ರನೇ, ಅವಧೂತನ ದಿಣ್ಣೆಗೆ ದಕ್ಷಿಣಕ್ಕೆ ಸವಾರು ನೂರು ಗಜದೊಳ ಗಾಗಿಯೇ ಒಂದು ಹಾಳ ಮನೆಯಿರುವುದು ನಿನಗೆ ಗೊತ್ತೋ? ಎಂದನು.

ನಾನು—ಅದನ್ನು ನಾನು ಕಾಣೆನೇ?

ರಾಮದಾಸ—ಅಲ್ಲಿ ಪಿಶಾಚಗಳು ಇರುವುವೆಂದು ಆರೂ ಅಲ್ಲಿಗೆ ಹೋಗು ವುದಿಲ್ಲ. ಅಲ್ಲಿ ಒಂದು ಕೊಠಡಿಗೆ ಬೀಗಹಾಕಿ, ಅದನ್ನು ನಾನು ಸ್ವಾಧೀನದಲ್ಲಿಟ್ಟು ಕೊಂಡಿರುವೆನು. ಈ ಊರಿನವರಾರೂ ಆಮನೆಯೊಳಗೆ ಕಾಲಿಟ್ಟವರಲ್ಲ. ಸಾವಿರ ವಲ್ಲ; ಹತ್ತು ಸಾವಿರ ಕೊಟ್ಟರೂ, ಆರೂ ಆಮನೆಯೊಳಗೆ ಹೋಗಲು ಸಾಹಸ ಪಡುವುದಿಲ್ಲ. ಅಲ್ಲಿಗೆ ಕರೆದುಕೊಂಡು ಹೋಗಿ ಇಟ್ಟರೆ ಸರಿಯಷ್ಟೆ?

ನಾನು—ಹೆಂಗುಸಿನ ವಿಷಯ ಹೇಗಾದರೂ ಆಗುವುದು; ಅದು ದೊಡ್ಡ ದಲ್ಲ. ಈಗ ಬಂದಿರುವ ಕಷ್ಟದಿಂದ ಉದ್ಧಾರವಾಗುವುದು ಹೇಗೆ?

ರಾಮದಾಸ—ಆ ಹೆಂಗುಸಿಗಾಗಿಯೇ ನಾವು ಇಷ್ಟು ಶ್ರಮ ಪಡುತ್ತಿರು ವುದು. ಅವಳಿಗೆ ಒಂದು ಗತಿ ಕಾಣಿಸಿದರೆ, ನಮಗೆ ಮಹಾ ಲಾಭವುಂಟು. ನಮ್ಮ ಜಮೀನ್ದಾರರ ಸರ್ವಾಧಿಕಾರಿಯಾದ ವಿನಯಚಂದ್ರನೆಂಬುವನು ಆಕೆಯನ್ನು ಆತನ ಬಂಧುವಾದ ನವಮೋಹನರಾಯನೆಂಬುವನಿಗೆ ತಗಲುಗಟ್ಟಿ ಹತ್ತು ಹಣ ಸಂಪಾದಿಸಿ ಕೊಡುವುದಾಗಿ ಅಭಯವಿತ್ತಿರುವನು. ಅವನು ಈಗ ಅಮರಪುರಿಗೆ ಹೋಗಿ ಜಮೀನ್ದಾರರ ಮೊಖದ್ದಮೆಯೊಂದನ್ನು ಒಬ್ಬ ವಕೀಲನ ಕೈಗೆ ಕೊಟ್ಟಿ ರುವನು. ಆ ಮೊಖದ್ದಮೆಯಾದರೋ ಬೇರೆ ಯಾವುದೂ ಅಲ್ಲ. ನಮ್ಮ ರಾಮ ಪುರದ ಜಮೀನ್ದಾರರು ನವಮೋಹನರಾಯರ ಜಮೀನುಗಳನ್ನು ಅನ್ಯಾಯವಾಗಿ ಸ್ವಾಧೀನಪಡಿಸಿಕೊಂಡು ಆತನನ್ನು ದೂರತಳ್ಳಿಬಿಟ್ಟಿರುವರು. ಆದುದರಿಂದಲೇ ನವಮೋಹನರಾಯನಿಗೂ, ನಮ್ಮ ಜಮೀನ್ದಾರರಿಗೂ ಕಲಹವುಂಟಾಗಿರುವುದು.

ಈ ವ್ಯಾಜ್ಯವು ತಮ್ಮ ಕಡೆಯಾಗಬೇಕೆಂದು ನಮ್ಮ ಜಮೀನ್ದಾರರು ವಿನಯ ಚಂದ್ರನನ್ನು ಅಮರಪುರಿಗೆ ಕಳುಹಿಸಿ ದೊಡ್ಡ ಲಾಯರನ್ನು ಏರ್ಪಡಿಸಿ ಕೊಂಡಿರು ವರು. ವಿನಯಚಂದ್ರನು ನಮ್ಮ ಜಮೀನ್ದಾರರ ಹಣ ತಿಂದು ಅವರ ಕಡೆಯವ ನಂತೆಯೇ ನಟನೆ ಮಾಡಿ ಗುಟ್ಟಾದ ಸಂಗತಿಗಳೆಲ್ಲವನ್ನೂ ಅವನ ಬಂಧುವಾದ ನವಮೋಹನರಾಯನಿಗೆ ತಿಳಿಯಪಡಿಸುತ್ತಿರುವನು. ಈ ಒಳಗಣ ಸಂದರ್ಭವನ್ನು ನೋಡಿದರೆ ನಮ್ಮ ನವಮೋಹನರಾಯನ ಕಡೆಯೇ ವ್ಯಾಜ್ಯವು ಇತ್ಯರ್ಥವಾಗ ಬಹುದು. ಈ ನವಮೋಹನರಾಯರೇ ರಾಧೆಯನ್ನು ಅಪೇಕ್ಷಿಸಿರುವರು. ಅವರಿ ಗಾಗಿಯೇ ನಾವು ಆಕೆಯನ್ನು ಸಂಗ್ರಹಿಸಿ ಇಟ್ಟಿರುವೆವು. ಇದರಿಂದಲಾದರೂ ಎರಡು ಕಾಸು ಬಂದೀತೆಂಬ ಆಸೆಯಿಂದಲೇ ನಾವು ಈ ಕೆಲಸಕ್ಕೆ ಕೈ ಹಾಕಿದುದು. ಇಂದು ನಾಳೆಯೊಳಗಾಗಿಯೇ ಅವರು ಇಲ್ಲಿಗೆ ಬರುವವರಾಗಿರುವರು. ಅವರು ನಿಜವಾಗಿಯೂ ಇಲ್ಲಿಗೆ ಆವಾಗ ಹೊರಟುಬರುವರೆಂಬುದಕ್ಕೆ ಇಂದು ವಿನಯನಿಂದ ಕಾಗದವು ಬಂದೇ ಬರಬೇಕು. ಆ ಕಾಗದದಿಂದ ಎಲ್ಲ ಸಂಗತಿಗಳೂ ವಿಶದವಾಗಿ ಗೊತ್ತಾಗುವುವು. ಅವರು ಇಲ್ಲಿಗೆ ಬಂದರೆಂದರೆ ನಮಗೆ ಭಾರವೂ ತಪ್ಪುವುದು, ಪ್ರಯೋಜನವೂ ಆಗುವುದು; ಅಲ್ಲದೆ ಅವರಿಗೆ ಇಷ್ಟವೂ ನೆರವೇರಿ ಸುಖವೂ ಉಂಟಾಗುವುದು.

"ರಾಮದಾಸನಿಂದ ಇಷ್ಟು ಸಂಗತಿಗಳು ಇಷ್ಟು ಬೇಗನೆ ತಿಳಿದು ಬರುವು ವೆಂದು ನಾನು ಸ್ವಪ್ನದಲ್ಲಿಯೂ ಎಣಿಸಿರಲಿಲ್ಲ. ಕೆಲಸಗಾರನು ಕುಲಗೋತ್ರ ಗಳನ್ನರಿಯದ ಅಪರಿಚಿತನಿಗೆ ಇಷ್ಟೊಂದು ಸಲಿಗೆಯನ್ನು ತೋರಿಸಿ, ತನ್ನ ಹೃದ ಯವನ್ನು ಬಿಚ್ಚಿ ಹೇಳುವನೆಂದು ಆರು ತಾನೇ ಬಲ್ಲವರಾಗಿದ್ದರು. ಇಷ್ಟು ಭಯಂ ಕರವಾದ ಕಾರ್ಯದಲ್ಲಿ ಉದ್ಯುಕ್ತರಾಗಿರುವವರು ತಮ್ಮ ಕೆಲಸಗಳನ್ನು ಗೋಪ್ಯ ವಾಗಿಟ್ಟುಕೊಂಡು ಕೆಲಸಮಾಡಬೇಕು. ನಿಜವಾಗಿಯೂ ಇವರು ಕೆಲಸಗಾರರೆಂದು ನಾನು ಹೇಳುವುದಿಲ್ಲ. ಹೇಗಾದರೂ ಆಗಲಿ; ನಾನು ವೇಷವನ್ನು ಹೂಡಿದುದಕ್ಕೆ ನಿಷ್ಫಲವೇನೂ ಆಗಲಿಲ್ಲ; ಗುಟ್ಟೆಲ್ಲವೂ ರಟ್ಟಾದುದು. ನನಗೆ ಬೇಕಾದುದೂ ಅದೇ," ಎಂದು ನನ್ನೊಳಗೆ ನಾನೇ ಆಲೋಚಿಸಿಕೊಂಡು ರಾಮದಾಸನ ಮಾತಿಗೆ ಉತ್ತರವಾಗಿ—ಮಿತ್ರನೇ, ಹಾಗಾದರೆ ಆಕೆಯನ್ನು ಸರಿಯಾದ ಸ್ಥಳದಲ್ಲಿಡುವುದು ಮೊದಲನೆಯ ಕೆಲಸವು. ಹಾಗೆ ಮಾಡಿದರೆ ಮನಸ್ಸಿಗೆ ಚಿಂತೆಯಿರುವುದಿಲ್ಲ. ನವಮೋಹನನು ಬಂದ ಮೇಲೆ ಆತನಿಗೆ ಹೇಗೆ ಬೇಕೋ ಹಾಗೆ ಮಾಡಿಕೊಳ್ಳಲಿ. ನಮಗೆ ಬರಬೇಕಾದ ಹಣವನ್ನು ಮಟ್ಟಿಗೆ ಮೊದಲು ಬರಮಾಡಿಕೊಳ್ಳಬೇಕು. ಕೆಲಸವಾದ ಮೇಲೆ ಹಣ ಕೊಡುವುದಕ್ಕೆ ಆರಿಗೂ ಮನಸ್ಸು ಬರುವುದಿಲ್ಲ, ಎಂದು ಹೇಳಿದೆನು.

ರಾಮದಾಸನು ನನ್ನ ಮಾತನ್ನು ಕೇಳಿ ಸಂತೋಷಪಟ್ಟು ನನಗೂ ಒಂದು ಭಾಗವನ್ನು ಕೊಡುವುದಾಗಿ ಒಪ್ಪಿಕೊಂಡನು. ಬಳಿಕ ನಾನು ಅವನನ್ನು ನೋಡಿ—ಈ ರಾತ್ರಿ ಹತ್ತು ಗಂಟೆಯ ಸಮಯದಲ್ಲಿ ನಾವು ಅಲ್ಲಿಗೆ ಆಕೆಯನ್ನು ಎತ್ತಿಕೊಂಡು ಹೋಗಿ ಭದ್ರಪಡಿಸೋಣ. ನಾವೂ ಅಲ್ಲಿಯೇ ಇದ್ದುಕೊಂಡು ಮುಂದಿನ ಸಂಗತಿಗಳನ್ನು ಮಾತನಾಡಿಕೊಳ್ಳುವ. ಈಗ ನಾನು ಸುತ್ತಿಕೊಂಡು ಬರುವೆನು. ಗ್ರಾಮದಲ್ಲಿ ಇನ್ನೇನಾದರೂ ಹೆಚ್ಚು ವರ್ತಮಾನವಿದ್ದರೆ ಇಲ್ಲಿಗೆ ತರುವೆನು, ಎಂದೆನು.

ರಾಮದಾಸನು ನನ್ನನ್ನು ಊಟಮಾಡಿಕೊಂಡು ಹೋಗಬೇಕೆಂದು ಎಷ್ಟು ನಿರ್ಬಂಧಪಡಿಸಿದರೂ, ನಾನು ಅದಕ್ಕೆ ಸಮ್ಮತಿಸದೆ—ಊಟವೇನು, ಹೇಗಿದ್ದರೂ ಆಗುವುದು. ಮೊದಲು ನಮ್ಮ ಕಾರ್ಯವು ನೆರವೇರಲಿ. ಆಮೇಲೆ ನಾವು ಸಾವಕಾಶವಾಗಿ ಕುಳಿತುಕೊಂಡು ಭೋಜನಮಾಡುವ, ಎಂದು ಹೇಳಿ ಹೊರಟು ಹೋದೆನು.

ರಾಮದಾಸ—ರಾತ್ರಿ ಹತ್ತು ಗಂಟೆ ಎಂಬುದು ಜ್ಞಾಪಕವಿದೆಯಷ್ಟೆ? ಅದನ್ನು ಮರೆಯ ಬೇಡ, ಕಂಡೆಯಾ?

ನಾನು—ಮರೆವುದೆಂದರೇನು? ಮರೆತರೆ ತಲೆ ಹೋಗುವುದಿಲ್ಲವೇ? ನಾನು ತಪ್ಪದೆಯೇ ಬರುವೆನು. ಎಲ್ಲವೂ ಸಿದ್ಧವಾಗಿರಲಿ.

ನಾನು ಇಷ್ಟು ಮಾತುಕತೆಗಳನ್ನಾಡಿ ಅವನ ಅಪ್ಪಣೆಯನ್ನು ತೆಗೆದುಕೊಂಡು "ಅಮ್ಮೊಂತುತ್ಕವಳಾ ಕೊಡೀ ತಾಯೆ" ಎಂದು ಹೊರಟು ಹೋದೆನು.

ನಾನು ಕತ್ತಲೆಯಾದ ಕೂಡಲೇ ವೇಷವನ್ನು ಮಾರ್ಪಡಿಸಿ ಪೋಲೀಸು ಠಾಣೆಗೆ ಹೋಗಿ ಅಲ್ಲಿದ್ದ ಅಧಿಕಾರಿಗೆ ನಡೆದ ಸಂಗತಿಗಳೆಲ್ಲವನ್ನೂ ವಿಶದವಾಗಿ ತಿಳಿಸಿದೆನು. ಅಧಿಕಾರಿಯು ಬೆರಗಾದನು. ಆತನು ಗ್ರಾಮವನ್ನೆಲ್ಲಾ ಹುಡುಕಿ ಹುಡುಕಿ ಸತ್ತು ಸುಣ್ಣವಾದರೂ ಆಕೆಯು ಸಿಕ್ಕದಿರುವಾಗ ನಾನು ಒಂದು ಕ್ಷಣ ಕಾಲದಲ್ಲಿ ಗುಟ್ಟನ್ನು ಭೇದಿಸಿ, ತತ್ತ್ವವನ್ನು ತಿಳಿದುಕೊಂಡು ಬಂದುದಕ್ಕಾಗಿ ಅಲ್ಲಿದ್ದವರೆಲ್ಲರೂ ಚಮತ್ಕೃತರಾದರು. ರಾತ್ರಿ ಹತ್ತು ಗಂಟೆಗೆ ಮುಂಚೆಯೇ ಹತ್ತು ಜನ ಪೋಲೀಸಿನವರು, ಇಬ್ಬರು ಅಧಿಕಾರಿಗಳು, ಆಯುಧ ಪಾಣಿಗಳಾಗಿ ಪಿಶಾಚಗೃಹದ ಸುತ್ತಮುತ್ತಲೂ ಅವಿತಿಟ್ಟುಕೊಂಡಿರಬೇಕೆಂದು ನಿಶ್ಚಯವಾಯಿತು. ರಾಮದಾಸನೂ ಅವನ ಸ್ನೇಹಿತರೂ ಅಲ್ಲಿಗೆ ಬಂದ ಕೂಡಲೇ ನಾನು ಸೀಟಿಯನ್ನು ಊದುವುದಾಗಿ ಹೇಳಿದೆನು. ಅನಂತರ ಪೋಲೀಸಿನವರೆಲ್ಲರೂ ಮನೆಯನ್ನು ಆವರಿಸಿಕೊಂಡು ದುಷ್ಕರ್ಮಿಗಳನ್ನು ಕೈಗಳಿಗೆ ಕೋಳಹಾಕಿ ಬಂಧನ

ದಲ್ಲಿಡಬೇಕೆಂದು ತಿಳಿಸಿದೆನು. ಅದಾದ ಕೂಡಲೇ ಜಮಿನಾಧಾರನಿಗೆ ಹೇಳಿ ಪಾಲ್ಕಿಯನ್ನು ತರಿಸಿ, ರಾಧೆಯನ್ನು ಮನೆಗೆ ಕರೆದುಕೊಂಡು ಹೋಗುವುದಕ್ಕೆ ತಕ್ಕ ಏರ್ಪಾಡು ಮಾಡುವೆನು, ಎಂದು ಅಧಿಕಾರಿಗೆ ಹೇಳಿದೆನು.

---

## ಹದಿನೈದನೆಯ ವಿಲಾಸ

ಪೋಲೀಸು ಠಾಣ್ಯದಿಂದ ಅಂಚೆಯ ಕಛೇರಿಗೆ ರಾಮದಾಸನ ಹೆಸರಿನಲ್ಲಿ ಆವ ಕಾಗದ ಬಂದರೂ ಪೋಲೀಸು ಠಾಣೆಗೆ ಕಳುಹಿಸಬೇಕೆಂದು ಪ್ರಾರ್ಥನಾ ಪತ್ರವು ಬರೆಯಲ್ಪಟ್ಟಿತು. ಇದಾದ ಒಂದು ಗಂಟೆಯೊಳಗಾಗಿಯೇ ರಾಮದಾಸನ ಹೆಸರಿಗೆ ಬಂದಿದ್ದ ಒಂದು ಕಾಗದವು ಪೋಲೀಸು ಠಾಣೆಗೆ ಬಂದಿತು. ಪೋಲೀಸು ಅಧಿಕಾರಿಯು ಅದನ್ನು ನನ್ನ ಕೈಗೆ ಕೊಟ್ಟನು. ನಾನು ಆ ಕಾಗದವನ್ನು ಬಿಚ್ಚಿ ನೋಡಿದೆನು. ರಾಮದಾಸನು ಊಹಿಸಿದ್ದ ಹಾಗೆಯೇ ವಿನಯಚಂದ್ರನು ಆತನ ಹೆಸರಿನಲ್ಲಿ ಕಾಗದ ಬರೆದಿದ್ದನು.

ಪತ್ರ

ನಿಮ್ಮ ಅಭಿಪ್ರಾಯದಂತೆ ನವಮೋಹನನಿಗೆ ತಿಳಿಯಪಡಿಸಿ ಐದುನೂರು ರೂಪಾಯಿಗಳನ್ನು ಕೊಡುವುದಾಗಿ ಒಪ್ಪಿಸಿರುವೆನು. ವ್ಯಕ್ತಿಯನ್ನು ಯತ್ನದಿಂದ ರಕ್ಷಿಸಿಕೊಂಡು ಬರಬೇಕು. ನಾಗಪುರದಲ್ಲಿರುವ ಆತನ ತೋಟಕ್ಕೆ ಆಕೆಯನ್ನು ಕರೆದುಕೊಂಡು ಬಂದು ಬಿಡುವುದಾದರೆ, ಆಗಲೇ ನಿನ್ನ ಹಣವನ್ನು ಸಲ್ಲಿಸಿ ಬಿಡುವರು. ನಿನ್ನ ಕಾಗದದಲ್ಲಿ ಮತ್ತೊಂದು ಕಾಗದವನ್ನು ಇಟ್ಟಿರುವೆನು. ನೀನೇ ಹೋಗಿ ಅದನ್ನು ರಾಮಕುಮಾರದತ್ತನಿಗೆ ಕೊಡಬೇಕು. ಆತನಲ್ಲಿಯೂ ಅನೇಕ ಸಂಗತಿಗಳಿರುವುವು. ಅದರಿಂದಲೂ ನಿನಗೆ ಲಾಭವುಂಟು. ನೀನು ಮಟ್ಟಿಗೆ ಅವರು ಹೇಳಿದ ಹಾಗೆ ಕೆಲಸಮಾಡು. ನಾನು ಬಂದ ಕೂಡಲೇ ಮುಂದಣ ಕೆಲಸವನ್ನು ನೋಡಿಕೊಳ್ಳುವೆನು.

ಇತಿ ವಿನಯಚಂದ್ರರಾಯ.

ಹೊರಗಣ ಕಾಗದದೊಳಗೆ ಮತ್ತೊಂದು ಕಾಗದವಿದ್ದುದನ್ನು ನೋಡಿ ನಾನು ಅದನ್ನೂ ಬಿಚ್ಚಿ ನೋಡಿದೆನು.

ಮತ್ತೊಂದು ಪತ್ರ

ಮಾನ್ಯವರ ಶ್ರೀಯುತ ರಾಮಕುಮಾರದತ್ತ ಮಹಾಶಯ ಸಮೀಪೇಷು,
ಅಧೀನನ ನಿವೇದನ ವೇನೆಂದರೆ—

ನಾನು ಅಮರಪುರಿಯಲ್ಲಿ ಆವ ಆಟವನ್ನು ಆಡಿರುವೆನೋ ಅದನ್ನು ದಡ್ಡರಾದ ಅಲ್ಲಿಯವರು ಅರಿಯರು. ಅಮರೇಂದ್ರನಾಥನನ್ನು ನಾನು ಕಂಡು ಹಿಡಿದು ಅವನ ವ್ಯವಹಾರಗಳನ್ನು ತಿಳಿಯಲೋಸುಗ ಜನರನ್ನಿಟ್ಟಿರುವೆನು. ಆತನು ನಿಮ್ಮನ್ನು ಹುಡುಕುವುದಕ್ಕಾಗಿ ಪತ್ತೇದಾರನೊಬ್ಬನನ್ನು ನಿಯಮಿಸಿ ಕೊಂಡಿರುವನು. ನೀವು ಬಾಡಿಗೆಗೆ ತೆಗೆದ ಎಪ್ಪತ್ತುಮೂರು, ಎಪ್ಪತ್ತನಾಲ್ಕು, ಎಪ್ಪತ್ತೈದನೇ ನಂಬರು ಮನೆಗಳು ಹಾಗೆಯೇ ಜನರಿಂದ ತುಂಬಿರುವುವು. ಎಲ್ಲರೂ ನಿಮ್ಮನ್ನೇ ನಿರೀಕ್ಷಿಸಿಕೊಂಡಿರುವರು. ಅಲ್ಲಿಯವರು ನಿಮಗೆ ಎರಡು ಮೂರು ಕಾಗದಗಳನ್ನು ಬರೆದಿದ್ದರಂತೆ. ಅವಾವುದಕ್ಕೂ ನಿಮ್ಮಿಂದ ಉತ್ತರವಿಲ್ಲದಿರುವುದರಿಂದ ಅವರೆಲ್ಲರೂ ಸಂದೇಹಪಟ್ಟು, ಎದೆಗೆಟ್ಟಿರುವರು. ನಾನು ನವಮೋಹನನೊಡನೆ ಸೇರಿಕೊಂಡು ಮತ್ತೊಂದಾಟವನ್ನು ಹೂಡಿರುವೆನು. ನಾನು ಅಲ್ಲಿಗೆ ಬಂದಾಗ ಅದನ್ನು ತಿಳಿಸುವೆನು. ಅದನ್ನು ಕೇಳಿ ನೀವು ಸಂತೋಷಪಡುವಿರೇ ಹೊರತು, ವ್ಯಸನಪಡಲಾರಿರಿ. ಎರಡು ಮೂರು ದಿನಗಳೊಳಗಾಗಿಯೇ ನಾನು ನವಮೋಹನನೊಡನೆ ಅಲ್ಲಿಗೆ ಬರುವವನಾಗಿರುವೆನು.

ಇತಿ ಶ್ರೀ ವಿನಯಚಂದ್ರರಾಯ.

## ಹದಿನಾರನೆಯ ವಿಲಾಸ

ವಿನಯನ ಇವೆರಡು ಕಾಗದಗಳನ್ನೂ ನಾನು ಓದಿದ ಮೇಲೆ ನನ್ನ ಸಂದೇಹವೆಲ್ಲವೂ ತೊಲಗಿತು. ಈ ಮಹಾ ವಿಪತ್ತಿಗೆ ವಿನಯನೇ ಕಾರಣವೆಂದು ನಾನು ತಿಳಿದುಕೊಂಡು, ಪೋಲೀಸು ಠಾಣೆಯಿಂದ ಹೊರಟು ಶ್ರೀ ರಾಜರಾಜೇಶ್ವರ ಚಕ್ರವರ್ತಿಯವರ ಮನೆಗೆ ಹೋದೆನು. ಆತನು ನನ್ನನ್ನು ಕಂಡ ಕೂಡಲೇ—ಮಹಾಶಯ! ಇದೇನು ಇಷ್ಟುಹೊತ್ತಿಗೆ ಇಲ್ಲಿ ಬರೋಣವಾಯಿತು. ಹೆಚ್ಚಿನ ವಿಷಯವೇನೂ ಇಲ್ಲವಷ್ಟೆ? ಎಂದು ಕೇಳಿದನು.

ನಾನು—ಅಂಥದೇನೂ ಇಲ್ಲ; ತಮ್ಮನ್ನು ಕಂಡು ಒಂದು ಸಂಗತಿಯನ್ನು ಮಟ್ಟಿಗೆ ಕೇಳಿಕೊಂಡು ಹೋಗೋಣವೆಂದು ಬಂದೆನು.

ರಾಜರಾಜ—ಅದೇನು?

ನಾನು—ರಾಮ ಕುಮಾರದತ್ತರೆಂಬುವರು ಆರಾದರೂ ಇಲ್ಲಿರುವರೇ?

ರಾಜರಾಜ—ಇರುವರು; ಅದೇಕೆ?

ನಾನು—ಅವರಿಂದ ನನಗೆ ಕೊಂಚ ಕೆಲಸವಿದೆ.

ರಾಜರಾಜ—ನನಗೆ ತಿಳಿಸಕೂಡದೇ ?

ನಾನು—ಇಲ್ಲ ; ಹಾಗೆ ತಿಳಿಸುವುದು ಪತ್ತೇದಾರಿಯ ಧರ್ಮವಲ್ಲ.

ರಾಜರಾಜ—ನಿಮ್ಮನ್ನು ಕೆಲಸದಲ್ಲಿ ನಿಯೋಗಿಸಿಕೊಂಡಿರುವವನು ನಾನಲ್ಲವೇ? ನನಗೆ ಹೇಳದೆ ಮತ್ತಾರಿಗೆ ಹೇಳಬೇಕು ?

ನಾನು—ಹೇಳದೇ ಇರುವುದಕ್ಕೆ ಅನೇಕ ಕಾರಣಗಳುಂಟು. ಕೆಲಸದಲ್ಲಿರುವವನಿಗೆ ಅದರ ಕಷ್ಟವು ಗೊತ್ತಾಗುವುದು. ಎಲ್ಲಿಯ ವರೆಗೂ ಕೈಕೊಂಡ ಕೆಲಸವು ನೆರವೇರುವುದಿಲ್ಲವೋ, ಅಲ್ಲಿಯ ವರೆಗೂ ಆರಿಗೂ ಆವುದನ್ನೂ ಹೇಳುವುದು ಸರಿಯಲ್ಲ. ಇದರಿಂದ ನಾನು ಮೊದಲು ಆಲೋಚಿಸಿದ ಕೆಲಸವು ಕೊನೆಗೆ ಕೆಟ್ಟುಹೋಗಬಹುದು. ಹೀಗಿರುವಲ್ಲಿ ನಾನು ಆವುದನ್ನು ಸಿದ್ಧಾಂತವಾಗಿ ಹೇಳಲಿ ?

ರಾಜರಾಜ—ನೀವು ಆಲೋಚಿಸಿರುವಷ್ಟನ್ನಾದರೂ ಹೇಳುವುದಕ್ಕೇನು ? ಕೆಲಸವು ಕೆಟ್ಟರೆ ಕೆಡಲಿ, ಬಿಟ್ಟರೆ ಬಿಡಲಿ ; ಅದರಿಂದೇನೂ ನಷ್ಟವಿಲ್ಲವಷ್ಟೇ ?

ನಾನು—ಅದರಲ್ಲಿಯೂ ನಷ್ಟವಿದೆ. ಈಗ ಅದನ್ನು ಕುರಿತು ಜಿಜ್ಞಾಸೆ ಮಾಡುವುದಕ್ಕೆ ಕಾಲವು ಸಾಲದು. ತಾವು ದಯೆಯಿಟ್ಟು ನನ್ನನ್ನು ನಿರ್ಬಂಧಪಡಿಸಲಾಗದು. ಕಾರ್ಯವು ನೆರವೇರಿದ ಬಳಿಕ ಮೊದಲು ನಿಮಗೇ ತಿಳಿಯಪಡಿಸುವೆನು. ಈಗ ತಿಳಿಯುವುದನ್ನು ನಾಳೆ ತಿಳಿದರಾಯಿತು.

ರಾಜರಾಜ—ನನ್ನದು ಹಾಗಿರಲಿ; ರಾಧೆಯ ವಿಷಯದಲ್ಲಿ ನೀವು ಹೇಳಿದ್ದುದೇನು ?

ನಾನು—ನಾನು ಏನ ಹೇಳಿದ್ದೆನು ?

ರಾಜರಾಜ—ಅವಳು ನಮ್ಮೂರಿನಲ್ಲಿಯೇ ಇರುವಳೆಂದಲ್ಲವೇ ನೀವು ಹೇಳಿದ್ದುದು ?

ನಾನು—ಆ ಹೆಂಗುಸು ರಾಮಪುರವನ್ನು ತ್ಯಾಗಮಾಡಿ ಹೊರಗೆ ಹೋಗಿಲ್ಲವೆಂದು ನಾನು ಊಹಿಸಿರುವೆನೆಂದು ಹೇಳಿದ್ದುದುಂಟು. ತಾವು ಅನುಮಾನವನ್ನೇ ನಂಬಿಕೊಂಡು ಸಂತೋಷಪಟ್ಟುಕೊಂಡಿದ್ದಿರಿ. ಈಗ ಇದು ಸುಳ್ಳಾಗುವುದಾದರೆ ತಮಗೆ ಎಷ್ಟು ವ್ಯಸನವಾಗುವುದು, ನೋಡಿರಿ. ಅದಕ್ಕಾಗಿಯೇ ಕೆಲಸವಾಗುವ ವರೆಗೂ ಆರಿಗೂ ಆವುದನ್ನೂ ಹೇಳಬಾರದು.

ರಾಜರಾಜ—(ನಿರಾಶನಾಗಿ) ರಾಧೆಯ ಸಮಾಚಾರವೇ ಗೊತ್ತಾಗಲಿಲ್ಲವೇ?

ನಾನು ರಾಜರಾಜೇಶ್ವರರ ಮನೋಭಾವವನ್ನು ನೋಡಿ ಅವರು ನಿರಾಶರಾಗಿರುವರೆಂದು ತಿಳಿದು, ಅವರ ಸಂತೋಷಕ್ಕಾಗಿ—ತಾವು ನಿರಾಶರಾಗಬೇಕಾದುದಿಲ್ಲ. ಈ ದಿನವೇ ಆಕೆಯು ಸಿಕ್ಕುವಳು, ಎಂದು ಹೇಳಿ ಸಮಾಧಾನಪಡಿಸಿದೆನು.

ರಾಜರಾಜ—ನೀವಾದರೋ ಮಹಾ ಸಮರ್ಥರು. ಒಂದು ಕ್ಷಣದಲ್ಲಿ ನಿರಾಶೆಯನ್ನು ತೋರ್ಪಡಿಸುವಿರಿ ; ಮತ್ತೊಂದು ಕ್ಷಣದಲ್ಲಿ ಆಶೆಯನ್ನು ಬೀರುವಿರಿ; ಆವುದನ್ನು ನಾವು ನಿಜವೆಂದು ನಂಬಬೇಕು? ನಮ್ಮನ್ನು ಮಟ್ಟಿಗೆ ಸಂಶಯದಲ್ಲಿಡಬೇಡಿರಿ, ಕಂಡಿರಾ? ನೀವೇನೋ ಕೈಕೊಂಡ ಕೆಲಸವನ್ನು ಸಾಧಿಸಬಲ್ಲಿರೆಂದು ನನಗೆ ನಂಬುಗೆಯುಂಟು. ಹೀಗಿರುವಲ್ಲಿ ನಮ್ಮನ್ನು ಹೀಗೇಕೆ ಸಂಕಟಪಡಿಸಬೇಕು? ನಡೆದ ಒಂದೆರಡು ಸಂಗತಿಗಳನ್ನು ಹೇಳಿಯಾದರೂ ನಮ್ಮನ್ನು ನಿಶ್ಚಿಂತರನ್ನಾಗಿ ಮಾಡಬಾರದೇ ?

ನಾನು—ಮಹಾ ಪ್ರಭೂ ! ಕ್ಷಮಿಸೋಣವಾಗಲಿ. ಪೋಲೀಸಿನವರಿಗೆ ಹೊರತಾಗಿ ಮತ್ತಾರಿಗೂ ನಾವು ಗುಟ್ಟನ್ನು ಹೇಳುವುದಿಲ್ಲ. ಇದರ ಮೇಲೂ ನಾವು ಮಾಡುವ ಕೆಲಸವು ಸಾಧಾರಣ ಮನುಷ್ಯರಿಗೆ ಗೊತ್ತಾಗುವುದೂ ಇಲ್ಲ. ಅದ, ಕಾರಣ ತಾವು ನನ್ನನ್ನು ಹೀಗೆಲ್ಲಾ ತೊಂದರೆಪಡಿಸಬಾರದು. ನಾನು ಕೇಳುವ ಪ್ರಶ್ನೆಗಳಿಗೆ ಮಾತ್ರವೇ ಉತ್ತರ ಕೊಡೋಣವಾಗಲಿ. ರಾಮ ಕುಮಾರ ದತ್ತರೆಂಬುವರು ನಿಮ್ಮ ಬಂಧುಗಳೋ ?

ರಾಜರಾಜ—ಅಹುದು ;

ನಾನು—ಅದು ಹೇಗೆ ?

ರಾಜರಾಜ—ಅವನು ನನ್ನ ಸೋದರಮಾವನ ಮಗನು.

ನಾನು—ಅವರು ನಿಮಗಿಂತಲೂ ಚಿಕ್ಕವರೋ, ದೊಡ್ಡವರೋ ?

ರಾಜರಾಜ—ಎಷ್ಟೋ ಚಿಕ್ಕವನು. ನಾನೇ ಆತನನ್ನು ಸಾಕಿ ಸಲಹಿ ದೊಡ್ಡವನನ್ನಾಗಿ ಮಾಡಿದೆನು.

ನಾನು—ಆತನ ಶೀಲ ಸ್ವಭಾವಗಳು ಹೇಗೆ?

ರಾಜರಾಜ—ಹುಡುಗನಾಗಿದ್ದಾಗ ಒಳ್ಳೆಯವನಾಗಿಯೇ ಇದ್ದನು. ಈಗ

ಕೆಟ್ಟು ಹೋಗಿರುವನೆಂದು ತಿಳಿದು ಬರುತ್ತಿರುವುದು. ದುರ್ವ್ಯಾಪಾರದಲ್ಲಿ ಕೊನೆ ಗಂಡಿರುವನೆಂತಲೂ ಜನರು ಆಡಿಕೊಳ್ಳುತ್ತಿರುವರು.

ನಾನು—ಅವರಿಗೂ ತಮಗೂ ನಡತೆ ಹೇಗಿರುವುದು ?

ರಾಜರಾಜ—ಕೊಡಲಿಯಿಂದ ತಲೆಯನ್ನು ತುರಿಸಿಕೊಂಡ ಹಾಗೆಯೇ. ನನ್ನನ್ನು ಕಂಡರೆ ಅವನಿಗೆ ಜಾತಿ ದ್ವೇಷವು ನನಗೆ ಕಿಡುಕನ್ನು ಮಾಡುವುದರಲ್ಲಿ ಅವನು ಆವಾಗಲೂ ಅಗ್ರೇಸರನು.

ನಾನು—ಆತನಿಂದ ತಮಗೆ ಕಿಡುಕೇನಾಗಿರುವುದು ?

ರಾಜರಾಜ—ಇದು ವರೆಗೂ ನನಗೇನೂ ಆಗಿಲ್ಲ.

ನಾನು—ಈಗ ಅವರೆಲ್ಲಿ ವಾಸವಾಗಿರುವರು ?

ರಾಜರಾಜ—ಹುಡುಗನಾಗಿರುವ ವರೆಗೂ ನನ್ನಲ್ಲಿಯೇ ಇದ್ದನು. ಗಡ್ಡ ಮೀಸೆಗಳು ಬಳೆದ ಮೇಲೆ ಅವನಿಗೆ ನಾನು ಬೇಕಾಗಲಿಲ್ಲ. ಈಗ ಅವನು ಎರಡು ಮೈಲಿಗಳಾಚೆ ಇರುವ ತನ್ನ ಜಮೀನಿನಲ್ಲಿ ಮನೆಯನ್ನು ಕಟ್ಟಿಕೊಂಡು ವಾಸ ವಾಗಿರುವನು.

ನಾನು—ಅವರು ಕೊಂಚ ದಿವಸದ ಹಿಂದೆ ಅಮರಪುರಿಗೇನಾದರೂ ಹೋಗಿದ್ದರೇ ?

ರಾಜರಾಜ—ಹೋಗಿದ್ದನೆಂದು ಕೇಳಿರುವೆನು.

ನಾನು—ಅವರು ಮತ್ತಾವಾಗ ಹಿಂದಿರುಗಿ ಬಂದರೆಂಬುದೇನಾದರೂ ತಮಗೆ ಗೊತ್ತೇ ?

ರಾಜರಾಜ—ಗೊತ್ತಿಲ್ಲ ;

ರಾಮಕುಮಾರನ ವಿಷಯದಲ್ಲಿ ಎಷ್ಟು ಸಂಗತಿಗಳು ತಿಳಿಯಬೇಕೋ ಅಷ್ಟನ್ನು ತಿಳಿದುದಾಯಿತು. ಬಳಿಕ ವಿನಯನ ವಿಷಯದಲ್ಲಿ ಕೆಲವು ಸಂಗತಿ ಗಳನ್ನು ಕೇಳಬೇಕೆಂದೆಣಿಸಿ—ಸ್ವಾಮಿ, ವಿನಯ ಚಂದ್ರನ ವಿಷಯದಲ್ಲಿ ತಮ್ಮ ವಿಶ್ವಾಸವು ಹೇಗೆ? ಎಂದು ಕೇಳಿದೆನು.

ರಾಜರಾಜ—ವಿಶ್ವಾಸವೇ ! ಇಲ್ಲಿಯ ವರೆಗೂ ಅವನು ಆವ ಅವಿಶ್ವಾಸದ ಸವನ್ನೂ ಮಾಡಿಲ್ಲ.

ನಾನು—ಅವನ ಕೈಯಲ್ಲಿ ಹಣಕಾಸುಗಳಿದ್ದಲ್ಲಿ?

ರಾಜರಾಜ—ಆವಾಗಲೂ ಇದ್ದೇ ಇರುವುವು: ಅವನ ಕೈಯಲ್ಲಿ ಹಣ ಕಾಸುಗಳಿಲ್ಲದ ದಿವಸವೇ ಇಲ್ಲ. ಇಲ್ಲಿಯ ವರೆಗೂ ಹಣದ ವಿಷಯದಲ್ಲಿ ವ್ಯತ್ಯಾಸ ವೇನೂ ಕಂಡು ಬಂದಂತೆ ತೋರುವುದಿಲ್ಲ.

ನಾನು—ವಿನಯನು ನಿಮ್ಮಿಂದ ಹತ್ತು ಸಾವಿರ ರೂಪಾಯಿಗಳನ್ನು ತೆಗೆದುಕೊಂಡು ಮೊಕದ್ದಮೆಯನ್ನು ಸರಿಪಡಿಸುವುದಕ್ಕಾಗಿ ಅಮರಪುರಿಗೆ ಹೋಗ ಲಿಲ್ಲವೇ ?

ರಾಜರಾಜ—ಹೋಗಿರುವನು ; ನಾನೇ ಅವನನ್ನು ಕಳುಹಿದೆನು.

ನಾನು—ತಾವು ವಕೀಲರಿಗೆ ಬರೆದಿರುವ ಕಾಗದದಲ್ಲಿ, "ವಿನಯನು ಬಹಳ ಚುರುಕಾದ ಮನುಷ್ಯನು. ಆವಾಗಲೂ ಎಚ್ಚರಿಕೆಯಿಂದಲೇ ಕೆಲಸವನ್ನು ಮಾಡುವನು" ಎಂದು ಬರೆದಿರುವಿರಷ್ಟೆ? ಆದುದರಿಂದ ಕಳ್ಳಕಾಕರು ಅಂತಹವ ರಿಂದ ಹಣ ಕಾಸುಗಳನ್ನು ಎಂದಿಗೂ ಸುಲಿದುಕೊಳ್ಳಲಾರರೆಂದು ನಿಮಗೆ ನಂಬುಗೆ ಬಲವಾಗಿದ್ದಿತಲ್ಲವೇ ?

ರಾಜರಾಜ—ಈಗಲೂ ನನಗೆ ನಂಬುಗೆಯು ಹಾಗೆಯೇ ಇರುವುದು. ತಾವು ಕೆಲವು ದಿನಗಳ ಮಟ್ಟಿಗೆ ಆತನನ್ನು ಅಲ್ಲಿಯೇ ಇರಬೇಕೆಂದು ಹೇಳಿದು ದಕ್ಕಾಗಿ ಆತನು ಅಲ್ಲಿಯೇ ನಿಂತಿರುವನು. ನೀವು ಇಲ್ಲಿಗೆ ಬಂದುದನ್ನು ನೋಡಿ ನಾನು ಆತನಿಗೆ ಕೂಡಲೆಯೇ ಹೊರಟು ಬರುವಂತೆ ತಂತಿಯನ್ನು ಕಳುಹಿರುವೆನು. ಆತನು ಇನ್ನು ಎರಡು ಮೂರು ದಿನಗಳೊಳಗಾಗಿಯೇ ಇಲ್ಲಿಗೆ ಬರುವುದಾಗಿ ಉತ್ತ ರವನ್ನು ಬರೆದಿರುವನು.

ನಾನು—ಹಿಂದಿರುಗಿ ಬರುವುದಾದರೆ ಆತನನ್ನು ತಮ್ಮ ಮನೆಗೆ ಸೇರಿಸ ಕೂಡದು.

ರಾಜರಾಜ—ಅದೇನು ಹೀಗೆ ಹೇಳುವಿರಿ? ಆತನು ಮಾಡಿರುವ ತಪ್ಪಾ ದರೂ ಏನು?

ನಾನು ಆ ಮಾತನ್ನು ಕೇಳಿ ಹಿಂದೆ ನಡೆದ ವೃತ್ತಾಂತವೆಲ್ಲವನ್ನೂ ನಡೆದುದು ನಡೆದ ಹಾಗೆಯೇ ಹೇಳಿ, ಕೊನೆಗೆ ವಿನಯನು ಬರೆದಿದ್ದ ಎರಡು ಕಾಗದಗಳನ್ನೂ ತೋರಿದೆನು.

ರಾಜರಾಜೇಶ್ವರ ಚಕ್ರವರ್ತಿಯು ಸಂಕಟದಿಂದ ನಿಟ್ಟುಸಿರನ್ನು ಬಿಟ್ಟು— "ಅಕಟಕಟಾ! ಇದೆಂತಹ ವಿಶ್ವಾಸಘಾತುಕತೆ! ನಾನು ಅರಿಯದೆಯೇ ಕೃಷ್ಣ ಸರ್ಪವನ್ನು ಇಷ್ಟು ದಿವಸ ನನ್ನ ಹೃದಯದಲ್ಲಿಟ್ಟು ಕಾಪಿಟ್ಟೆನಲ್ಲಾ! ಹಾ ದೈವವೇ, ಅದೆಂತಹ ಕೆಲಸವು ನಡೆದು ಹೋಯಿತು!" ಎಂದು ಗೋಳಿಡುತ್ತಿರುವಲ್ಲಿ, ನಾನು ರಾಧಾಮಣಿಯನ್ನು ಉದ್ಧಾರಮಾಡುವುದರಲ್ಲಿ ಆವಾವ ಉಪಾಯಗಳನ್ನು ಹೂಡಿದ್ದೆನೋ ಅವೆಲ್ಲವನ್ನೂ ಹೇಳಿ ಅಲ್ಲಿಂದೆದ್ದು ಹೊರಟು ಹೋದೆನು.

---

## ಹದಿನೇಳನೆಯ ವಿಲಾಸ

### ಉಪಸಂಹಾರ

ನಾನು ಒಂದು ಕೆಲಸವನ್ನು ಕೈಕೊಂಡುದಕ್ಕೆ ಎರಡು ಕೆಲಸಗಳಾದುವು. ನಾಲ್ಕು ಜನ ದುಷ್ಟರು ಏಕಕಾಲದಲ್ಲಿಯೇ ಸಿಕ್ಕಿಬಿದ್ದರು. ನಾನು ಎಷ್ಟೋ ದಿವಸ ಕೆಲಸಮಾಡಿ ನೋಡಿರುವೆನು. ಆದರೆ ಇಂತಹ ಅಪರೂಪಘಟನೆಯನ್ನು ನಾನೆಲ್ಲಿಯೂ ನೋಡಲಿಲ್ಲ. ನಾನು ವಿನಯನಿಗೆ ಸಂಬಂಧಪಟ್ಟ ವ್ಯವಹಾರವನ್ನು ವಿಚಾರಮಾಡುವುದಕ್ಕಾಗಿ ರಾಮಪುರಕ್ಕೆ ಬಂದರೆ, ಅಮರೇಂದ್ರನಾಥನ ವ್ಯವಹಾರವು ಇತ್ಯರ್ಥವಾಗ ಬಹುದೇ! ಪರಮಾತ್ಮನ ಲೀಲೆಯನ್ನು ಅರಿತವರಾರು?

ನವಮೋಹನನಿಗೂ ರಾಜರಾಜೇಶ್ವರನಿಗೂ ಇರುವ ಶತ್ರುತ್ವವು ರಾಮದಾಸನ ಮಾತಿನಿಂದಲೇ ತಿಳಿದುಬಂದಿತು. ರಾಮಕುಮಾರದತ್ತನಿಗೂ ರಾಜರಾಜೇಶ್ವರನಿಗೂ ಇರುವ ವೈಮನಸ್ಯವು ರಾಜರಾಜೇಶ್ವರನಿಂದಲೇ ಹೊರಪಟ್ಟಿತು.

ವಿನಯಚಂದ್ರನು ರಾಜರಾಜೇಶ್ವರನ ಸಮೀಪದಲ್ಲಿಯೇ ಇದ್ದುಕೊಂಡು, ಆತನ ವಿಶ್ವಾಸಕ್ಕೆ ಪಾತ್ರವಾಗಲು ಮಾಡಬೇಕಾದ ಕೆಲಸವೆಲ್ಲವನ್ನೂ ಮಾಡಿದ್ದನು. ಆದರೆ ಅವನಂತಹ ವಿಶ್ವಾಸಘಾತುಕನು ಈ ಪ್ರಪಂಚದಲ್ಲಿಲ್ಲ. ಅವನು ರಾಜರಾಜೇಶ್ವರನಿಗೆ ವಿಶ್ವಾಸಘಾತುಕನಾದರೂ ನವಮೋಹನನ ಹತ್ತಿರ ಕೇವಲವಾದ ವಿಶ್ವಾಸಕ್ಕೆ ಪಾತ್ರವಾಗಿದ್ದನು. ಸತ್ಪುರುಷರು ಸತ್ಪುರುಷರನ್ನೇ ಹುಡುಕಿಕೊಂಡು ಹೋಗುವರು. ದುಷ್ಟರು ದುಷ್ಟರನ್ನೇ ಸೇರುವರು. ಹಾಗಲ್ಲದಿದ್ದರೆ ವಿನಯಚಂದ್ರ, ರಾಮಕುಮಾರ, ನವಮೋಹನ, ರಾಮದಾಸ ಇವರೆಲ್ಲರೂ ಒಂದು ಕಡೆ ಹೇಗೆ ಸೇರುತ್ತಿದ್ದರು? ಈ ದುಷ್ಟಚತುಷ್ಟಯವು ಶ್ರೀ ರಾಜರಾಜೇಶ್ವರನ ಸರ್ವಸ್ವವನ್ನೂ ಅಪಹರಿಸಬೇಕೆಂದಿರುವುದೆಂದು ಇದರಿಂದಲೇ ನನಗೆ ತಿಳಿಯ ಬಂದಿತು.

ಆವುದು ಹೇಗಾದರೂ ಇರಲಿ. ನಾನು ಆರಾತ್ರಿ ಹತ್ತು ಗಂಟೆಯ ಸಮಯಕ್ಕೆ ಸರಿಯಾಗಿ ರಾಮದಾಸನ ಹತ್ತಿರಕ್ಕೆ ಹೋಗಿ, ಯುಕ್ತಿಯಿಂದ ಆತನಿಗೂ ಆತನ ಕಡೆಯವರಿಗೂ ಕೈಗಳಿಗೆ ಬೇಡಿಯನ್ನು ಹಾಕಿಸಿದೆನು. ರಾಧಾಮಾತೆಯು ದುಷ್ಟರ ಬಲೆಯಿಂದ ಉದ್ಧಾರವನ್ನು ಹೊಂದಿ ಪಾಲ್ಕಿಯಲ್ಲಿ ಕುಳಿತುಕೊಂಡು ಮನೆಗೆ ಹೋಗಿ ಸೇರಿಕೊಂಡಳು.

ವಿನಯನು ರಾಮದಾಸನಿಗೆ ಕಾಗದಗಳನ್ನು ಬರೆದುದೇ ಇಷ್ಟಕ್ಕೆಲ್ಲಾ ಪ್ರಮಾಣವಾಗಿ ನಿಂತಿತು. ಎಷ್ಟೋ ಜಾಣನಾಗಿದ್ದ ವಿನಯನು ಕೊಂಚದರಲ್ಲಿ ಮೋಸಹೋದುದರಿಂದ, ಇಷ್ಟೆಲ್ಲಾ ನಡೆದು ಹೋಯಿತು.

ನನ್ನ ಬುದ್ಧಿಯ ಚಮತ್ಕಾರದಿಂದ ಅಮರೇಂದ್ರನಾಥನ ಹತ್ತು ಲಕ್ಷ ರೂಪಾಯಿ ಬಾಳುವ ನಗ ನಟ್ಟುಗಳು ಸಿಕ್ಕಿದುವು. ಅದಕ್ಕಾಗಿ ನಾನು ಮಾಡಿದ ಕ್ರಿಯಾಕಲಾಪಗಳನ್ನು ಗ್ರಂಥಗಳಲ್ಲಿ ವರ್ಣಿಸ ಲಸದಳವು.

ರಾಜರಾಜೇಶ್ವರನ ಹತ್ತು ಸಾವಿರ ರೂಪಾಯಿಗಳಲ್ಲಿ ವೆಚ್ಚವಾದುದು ಹೋಗಲಿಕ್ಕಾಗಿ ಮುಕ್ಕಾಲುಪಾಲು ಹಣಕ್ಕೇನೂ ಮೋಸವಾಗಲಿಲ್ಲ.

ರಾಧಾಮಾತೆಯ ವಿಷಯದಲ್ಲಿ ಆರೂ ದುರಭಿಪ್ರಾಯಪಡಲಿಲ್ಲವಾಗಿ ಆಕೆಯ ತಂದೆಯು ಆಕೆಯನ್ನು ಮತ್ತೆ ಮನೆಗೆ ಸೇರಿಸಿಕೊಂಡನು.

ನಾನು ಈನಾಲ್ಕು ಜನರನ್ನೂ ಕೋರ್ಟಿಗೆ ಬರಮಾಡಿದೆನು. ಎಲ್ಲರಿಗೂ ಬಲವತ್ತರವಾದ ದಂಡನೆಯಾಯಿತು. ಬಳಿಕ ದುಷ್ಟ ಚತುಷ್ಟಯವೆನಿಸಿದ ವಿನಯಚಂದ್ರ, ನವಮೋಹನ, ರಾಮದಾಸ, ಹಾಗೂ ರಾಮಕುಮಾರ ಇವರುಗಳ ಪುಂಡಾಟವೇ ಅಡಗಿ ಹೋಯಿತು.

ಪ್ರಿಯಪಾಠಕ ಮಹಾಶಯ! ಇಲ್ಲಿಗೆ ನನ್ನ ಕತೆಯನ್ನು ಪೂರ್ತಿಗೊಳಿಸಿ ನಿಮ್ಮಗಳ ಅಪ್ಪಣೆಯನ್ನು ತೆಗೆದುಕೊಂಡು ನಾನು ಮುಂದಣ ಕೆಲಸಕ್ಕೆ ತೆರಳುವೆನು. ನಿಮ್ಮಗಳ ವಿಶ್ವಾಸವು ಏಕರೀತಿಯಾಗಿರಲಿ.

ಇತಿ—ಶಶಾಂಕ ಶೇಖರ,

ಪತ್ತೇದಾರ.



